ಪ್ರಕಾಶಕರು :
ಬಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ, ಧಾರವಾಡ.

## ರೋಮಾಂಚಕಾರಿಯಾದ ಪತ್ತೇದಾರೀ ಕಾದಂಬರಿಗಳು

| | | | |
|---|---|---|---|
| ಅದೃಶ್ಯ ಮನುಷ್ಯ | ೧ | ೦ | ೦ |
| ಕೊತವಾಲನ ಕಾರಸ್ಥಾನ | ೧ | ೦ | ೦ |
| ಕೊಂದವರು ಯಾರು ? | ೧ | ೪ | ೦ |
| ಕರೀ ಚಿಕ್ಕಿ | ೧ | ೪ | ೦ |
| ಡಾಕ್ಟರ್ ಗಿರೀಶ | ೦ | ೬ | ೦ |
| ಹಂತಕನು ಯಾರು ? | ೧ | ೪ | ೦ |

ವಿ. ಪಿ. ವೆಚ್ಚ ಬೇರೆ

ಸಮಾಜ ಪುಸ್ತಕಾಲಯ, ಧಾರವಾಡ.

ಮುದ್ರಕರು :
ಎಂ. ಜಿ. ಪಾಲೇಕರ
ವಸಂತ ಪ್ರೆಸ್, ಧಾರವಾಡ.

# ರತ್ನಗೋಲ

## ೧.

## ರತ್ನಗೋಲ

ರಾಮಪುರದ ಪ್ರಮುಖ ನಿವಾಸಿಗಳಲ್ಲಿ ಬಾಬೂರಾಯರು ಗಣ್ಯರಾದವರು. ದೊಡ್ಡ ಮನೆತನವೊಂದರಲ್ಲಿ ಅದರು ಜನ್ಮ ತಳೆದಿದ್ದರು. ಅವರ ಹಿರಿಯರು ಮೊದಲಿನಿಂದಲೂ ಯೋದ್ಧರಾಗಿ ಬಾಳಿದವರು. ದೇಶ ಬ್ರಿಟಿಶರ ಆಡಳತೆಗೆ ಬರುವ ಕಾಲದಲ್ಲಿ ತಲೆದೋರಿದ ದೊಂಬಿ ಹಾಗೂ ಅರಾಜಕತೆಗಳ ಸಮಯ ಸಾಧಿಸಿ ಬಾಬೂರಾಯರ ಪೂರ್ವಜರು ಸಾಕಷ್ಟು ಸಂಪತ್ತನ್ನು ಶೇಖರಿಸಿ ತಮ್ಮ ಭಾಂಡಾರ ಭರತಿ ಮಾಡಿದ್ದರು. ೧೮೫೭ರ ಬಂಡಾಯದ ಕಾಲದಲ್ಲಿ ಅನೇಕ ಚಿಕ್ಕಪುಟ್ಟ ಸಂಸ್ಥಾನಿಕರು ತಮ್ಮ ತಮ್ಮ ಮನೆತನಗಳ ಬೆಲೆ ಬಾಳುವ ಮುತ್ತು ರತ್ನದಾಭರಣಗಳನ್ನು ಅಲ್ಲಲ್ಲಿ ಅಡವಿಗಿಟ್ಟು ನಗದು ಹಣ ಶೇಖರಿಸುವ ಪ್ರಯತ್ನ ಮಾಡಿದ್ದರು. ಬಂಡಾಯದ ಬಿರುಗಾಳಿಗೆ ಶಿಲುಕಿ ಅವರಲ್ಲೆಷ್ಟೋ ಸಂಸ್ಥಾನಿಕರು ದಿಕ್ಕಾಪಾಲಾಗಿ ಹೋದುದರಿಂದ ಅವರು ಅಡವಿಟ್ಟ ಆಭರಣಗಳು ಇಟ್ಟವರಿಗೇ ಸಿಕ್ಕದಂತಾಗಿದ್ದಿತು. ಹಾಗೆ ಬಹುಮೂಲ್ಯ ಮುತ್ತು ರತ್ನದಾಭರಣಗಳನ್ನು ಸಂಪಾದಿಸಿದ ಭಾಗ್ಯಶಾಲಿಗಳಲ್ಲಿ ಬಾಬೂರಾಯರ ಪೂರ್ವಜರೂ ಒಬ್ಬರಾಗಿದ್ದರು.

ಪೂರ್ವಜರಿಂದ ಬಂದ ಸಂಪತ್ತನ್ನು ಹೆಚ್ಚಿಸುವ ಕಾರ್ಯವನ್ನು ರಾಯರು ಎಡೆಬಿಡದೆ ಸಾಗಿಸಿಕೊಂಡು ಬಂದಿದ್ದರು. ವ್ಯಾಪಾರ, ಶೇರ್, ಸಟ್ಟಾ ಇತ್ಯಾದಿಗಳಿಂದಾಗಿ ಅವರ ಭಾಂಡಾರ ದಿನೇ ದಿನೇ ಪುಷ್ಟವಾಗುತ್ತ ಬಂದಿದ್ದಿತು.

ಹಿಂದೂಸ್ಥಾನದ ಕೋಟ್ಯಾಧೀಶರಲ್ಲಿ ಬಾಬೂರಾಯರ ಗಣನೆಯಾಗುತ್ತಿತ್ತು. ಜತೆಗೆ ದಾನಶೂರನೆಂಬ ಕೀರ್ತಿಯೂ ಅವರಿಗೆ ದೊರಕಿತ್ತು.

ಆಸ್ಪತ್ರೆಯೊಂದನ್ನು ನಿರ್ಮಿಸಲು ಅವರು ಒಂದು ಲಕ್ಷ ರೂಪಾಯಿ ದಾನ ಮಾಡಿದ್ದುದರಿಂದ ಸರಕಾರ ಅವರಿಗೊಂದು ಪದವಿಯನ್ನು ಸಲ್ಲಿಸಿ ಗೌರವಿಸಿದ್ದಿತು. ಪದವಿಗಳಿಗೆ ಇನ್ನೂ ಮಾನಸನ್ಮಾನ ದೊರೆಯುತ್ತಿದ್ದ ಕಾಲದಲ್ಲಿ ನಡೆದ ಕತೆ ಇದು.

ಪದವಿಯೇನೋ ದೊರೆಯಿತು. ಆದರಿಂದಾಗಿ ಬಾಬೂರಾಯರ ಕಣ್ಣು ನೆತ್ತಿಗೇರಿದಂತಾಯಿತು. ಲಕ್ಷ ರೂಪಾಯಿಗಳನ್ನು ದಾನವಾಗಿ ಕೊಟ್ಟಿದ್ದಕ್ಕೆ ಪ್ರತಿಫಲವಾಗಿ ಆ ಪದವಿ ಬಂದು ಬಿಡುತ್ತಲೂ ಅವರು ಯಾರನ್ನೂ ಲಕ್ಷ್ಯಿಸದಂತಾದರು. ಅವರ ದಾನಶೂರತನ ಮರುಗಳಿಗೆಯಲ್ಲೇ ಮಾಯವಾಯಿತು. ಬಡವರನ್ನು ಪೀಡಿಸಿ ಹಣ ಸೆಳೆಯುವ ಕಾಯಕಕ್ಕಾರಂಭಿಸಿದರು. ಸುತ್ತಮುತ್ತಲಿನ ಹಳ್ಳಿಗಳ ಬಡ ಜನಕ್ಕೆಲ್ಲ ಅವರು ರಾವಣ ಸ್ವರೂಪಿಯಂತಾದರು. ಅವರ ಹೀನ ಕೃತ್ಯಗಳಿಂದಾಗಿ ಸರಕಾರಿ ಅಧಿಕಾರಿಗಳೂ ಅವರ ಮೇಲೆ ಕೋಪಗೊಳ್ಳುವಂತಾಯಿತು.

ಚಿನ್ನದಾಭರಣಗಳು, ನೋಟುಗಳು, ಹಾಗೂ ಶೇರುಗಳ ಪತ್ರಿಕೆಗಳನ್ನು ಸಂಗ್ರಹಿಸುವ ಗೀಳು ಅವರಿಗಿದ್ದಂತೆಯೆ ತೀರ ಪುರಾತನ ಕಾಲದ ಗ್ರಂಥಗಳನ್ನೂ ಪ್ರಾಚೀನ ವಸ್ತುಗಳನ್ನೂ ಕಲೆಹಾಕುವ ಹವ್ಯಾಸವೂ ಇತ್ತು. ಬಯಲು ಹವೆ ಲಕ್ಷ್ಮಿಗೆ ಒಗ್ಗುವದಿಲ್ಲವೆಂದು ತಿಳಿದು ಅವರು ಆಕೆಯನ್ನು ತಮ್ಮ ಮುಂದಿರದ ನೆಲಮನೆಯಲ್ಲಿ ಕೂಡಹಾಕಿದ್ದರು. ಸರಸ್ವತಿಗೆ ದೂಷಿತ ಹವೆಯನ್ನು ಕಂಡರಾಗದಿದ್ದರೂ ಸಹ ಅವರು ತಮ್ಮ ಗ್ರಂಥ ಸಂಗ್ರಹವನ್ನು ವಿಸ್ತೀರ್ಣ ಆವರೆ ದೂಷಿತ ಹವೆಯನ್ನುಳ್ಳ ಕೊಟಡಿಯೊಂದರಲ್ಲಿ ಇರಿಸಿದ್ದರು. ಆ ಕೊಟಡಿಯ ಗೋಡೆಗಳಿಗೆ ಹೊಂದಿಸಿ ಇಡಲಾಗಿದ್ದ ಕಪಾಟುಗಳಲ್ಲಿ ಅನೇಕ ಬಗೆಯ, ಅನೇಕ ಭಾಷೆಗಳ, ಅನೇಕ ಆಕಾರಗಳ ಗ್ರಂಥಗಳಿದ್ದುವು. ಅಲ್ಲಿ ಪಾಲಿ, ಸಂಸ್ಕೃತ, ಬ್ರಹ್ಮಿ, ಕನ್ನಡ, ತಮಿಳು, ಮರಾಠಿ, ಹಿಂದೀ, ಬಂಗಾಲಿ, ಇಂಗ್ಲಿಷ್, ಫ್ರಂಚ್, ಜರ್ಮನ್ ಇತ್ಯಾದಿ ಭಾಷೆಗಳ ಸಾವಿರಾರು ಪುಸ್ತಕಗಳಿದ್ದುವು. ಕೇವಲ ಅಚ್ಚಾದ ಗ್ರಂಥಗಳು ಮಾತ್ರವಲ್ಲ; ಹಸ್ತಲಿಖಿತ ಪ್ರತಿಗಳೂ ತಾಡವೋಲೆಯ ಗ್ರಂಥಗಳೂ, ಇಜಿಪ್ಶಿಯನ್ ಪುಸ್ತಕಗಳ ಹಾಳೆಗಳೂ, ಚಿತ್ರಗಳ ಸಂಪುಟಗಳೂ ಅಲ್ಲಿದ್ದುವು.

ಕಪಾಟುಗಳ ಮೇಲ್ಗಡೆ ಅನೇಕಾನೇಕ ಹಳೆ ಹೊಸ ಚಿತ್ರಗಳನ್ನೂ ನಕಾಶಗಳನ್ನೂ ತೂಗು ಹಾಕಿದ್ದರು. ಮೊಗಲ್, ರಜಪೂತ, ಪರ್ಶಿಯನ್, ಜಪಾನೀ ಇತ್ಯಾದಿ ಹಲವು ಬಗೆಯ ಹಲವು ರೀತಿಯ ಕಲಾಕೃತಿಗಳು ಅಲ್ಲಿದ್ದುವು. ಬೇರೆ ಬೇರೆ ಬಗೆಯ ಹಳೆಯ ಆಯುಧಗಳನ್ನೂ ಚಿಲಖತ್ತುಗಳನ್ನೂ ಸಂಗ್ರಹಿಸಿ ಅಲ್ಲಿರಿಸಲಾಗಿದ್ದಿತು. ಎರಡು ಕಪಾಟುಗಳ ಮಧ್ಯೆ ಬಿಟ್ಟಿದ್ದ ಸ್ಥಳದಲ್ಲಿ ಸಣ್ಣ ಸಣ್ಣ ಮೇಜು ಇರಿಸಿ ಅವುಗಳ ಮೇಲೆ ಹಳೆಯ ಮೂರ್ತಿಗಳನ್ನೂ, ಶಿಲ್ಪಗಳನ್ನೂ ಇರಿಸಲಾಗಿದ್ದಿತು. ಕೊಠಡಿಯ ಮಧ್ಯದಲ್ಲಿನ ಸ್ಥಳವೂ ಬರಿಯದಾಗಿರಲಿಲ್ಲ. ಹಳೆಯ ನಾಣ್ಯಗಳು, ತಾಮ್ರಪಟಗಳು, ಶಿಲಾಶಾಸನಗಳು, ರತ್ನಖಚಿತ ಕೃತಿಗಳು, ಶಿಲೆಗಳ ತುಂಡುಗಳನ್ನೊಳಗೊಂಡ 'ಶೋ ಕೇಸ್' ಇರಿಸಲಾಗಿದ್ದಿತು. ಸ್ವಲ್ಪದರಲ್ಲಿ ಹೇಳಬೇಕಾದರೆ ಬಾಬೂರಾಯರ ಕೊಟಡಿ ಪುಟ್ಟದೊಂದು ಮ್ಯುಜಿಯಂ ಆಗಿದ್ದಿತೆನ್ನಬಹುದು. ಪ್ರಾಚೀನ ವಸ್ತುಗಳ ಸಂಗ್ರಹ ಕಾರ್ಯವನ್ನವರು ಆರಂಭಿಸಿದ್ದು ಕೇವಲ ಮನರಂಜನೆಗಾಗಿ. ಆದರೆ ಬರಬರುತ್ತ ಸಂಗ್ರಹದ ಚಟ ಅಂಟಿಕೊಂಡಿತು ಯಾವುದಾದರೊಂದು ಹಳೆಯ ವಸ್ತು ಮಾರಾಟಕ್ಕಿದೆಯೆಂಬುದು ಅವರಿಗೆ ತಿಳಿದೊಡನೆಯೆ ಅವರು ಆವೇಶ ಬಂದವರ ಹಾಗೆ ಅದನ್ನು ಸಂಗ್ರಹಿಸುವ ಯೋಜನೆಗೆ ತೊಡಗುತ್ತಿದ್ದರು. ಆ ವಸ್ತು ವಿಶೇಷ ಮಹತ್ವದ್ದಾಗಿದ್ದರಂತೂ ಮುಗಿಯಿತು, ಅದು ಕೈಗೆ ಬರುವತನಕ ಅವರಿಗೆ ನಿದ್ರೆಯೂ ಬರುತ್ತಿರಲಿಲ್ಲ. ಪ್ರಾಚೀನ ಇತಿಹಾಸವನ್ನು ಕುರಿತು ಗ್ರಂಥ ಬರೆಯುವಂಥ ಬುದ್ಧಿ, ಅದಕ್ಕೆ ಅಗತ್ಯವಾದ ಸಾಧನೋಪಕರಣಗಳೂ ಅವರಲ್ಲಿದ್ದವು. ಆದರೆ ಆ ಕಾರ್ಯ ಮಾಡಲು ಅವರಿಗೆ ಮನಸ್ಸು ಬರುತ್ತಿರಲಿಲ್ಲ

ಪ್ರಾಚೀನ ವಸ್ತು ಸಂಗ್ರಹದ ಈ ಕಾರ್ಯಕ್ಕೆ ಅವರು ಪ್ರಾರಂಭಿಸಿದ ಹೊಸದರಲ್ಲಿ ಮ್ಯುಜಿಯಂನ ವ್ಯವಸ್ಥೆ ಅಚ್ಚುಕಟ್ಟಾಗಿತ್ತು ಆದರೆ ಬರಬರುತ್ತ ವಿಪರೀತ ವಸ್ತುಗಳು ಬರಲಾರಂಭಿಸಿದುದರಿಂದ ಅಲ್ಲಿ ಸ್ಥಳಸಂಕೋಚವಾಗಿ ಯಾವ ವಸ್ತುವನ್ನು ಎಲ್ಲಿ ಇಡಬೇಕೆನ್ನುವುದೇ ತಿಳಿಯದಂತಾಯಿತು. ಅದರಿಂದಾಗಿ ಅವ್ಯವಸ್ಥೆಯಾಗತೊಡಗಿತು. ಯಾವು ಯಾವುವೊ ವಸ್ತುಗಳು ಎಲ್ಲೆಲ್ಲೋ ಸ್ಥಳ ಹಿಡಿದವು. ಆದರೂ ಯಾವ ವಸ್ತು ಎಲ್ಲಿದೆ, ಅದನ್ನು ಸಂಪಾದಿಸಿದ್ದು ಎಲ್ಲಿಂದ, ಅದರ ಬೆಲೆ ಎಷ್ಟು, ಯೋಗ್ಯತೆಯೇನು, ಅದರ

ಕಾಲಮಾನವಾವುದು ಎಂಬುದರ ವಿವರಗಳೆಲ್ಲ ಬಾಬೂರಾಯರ ತಲೆಯಲ್ಲಿ ಸದಾಸಿದ್ಧವಾಗಿರುತ್ತಿದ್ದುವು.

ರಾಯರ ಸಂಗ್ರಹಾಲಯದಲ್ಲಿ ಇಷ್ಟು ವಿಲಕ್ಷಣ ಹಾಗೂ ಬಹುಮೂಲ್ಯ ವಸ್ತುಗಳ ಶೇಖರಣೆಯಾಗಿದ್ದಿತಾದರೂ ಆ ಸಂಗ್ರಹಾಲಯದ ಒಡೆಯನಿಗಿಂತ ಹೆಚ್ಚು ವಿಲಕ್ಷಣ ಹಾಗೂ ಬಹುಮೂಲ್ಯ ವಸ್ತುಗಳೇನೂ ಅಲ್ಲಿರಲಿಲ್ಲ. ಆನುವಂಶಿಕ ಶಿರಿವಂತಿಕೆಗೆ ಆನುವಂಶಿಕ ವ್ಯಾಪಾರೀವೃತ್ತಿಯು ಜೊತೆಯಾಗಿದ್ದುದರಿಂದ ಬಾಬೂರಾಯರು ಅಲ್ಪ ಕಾಲದಲ್ಲೇ 'ನವಕೋಟಿ ನಾರಾಯಣ' ಎಂಬ ಹೆಸರು ಸಂಪಾದಿಸಿದ್ದರು. ಕರ್ನಾಟಕ ಮತ್ತು ಮಹಾರಾಷ್ಟ್ರಗಳ ಪ್ರಮುಖ ನಗರಗಳಲ್ಲಿ ರಾಯರ ಒಡೆತನಕ್ಕೊಳಪಟ್ಟ ಐವತ್ತು ಅಂಗಡಿಗಳಿದ್ದುವು. ಆ ಅಂಗಡಿಗಳಿಂದ ಹರಿದು ಬರುವ ಲಾಭದ ಹೊಳೆ ರಾಯರ ಮನೆಯಲ್ಲಿ ಚಿನ್ನದ ರೂಪದಲ್ಲಿ ಗಟ್ಟಿಯಾಗಿ ಸಂಗ್ರಹಗೊಂಡಿದ್ದಿತು ಸ್ವತಃ ರಾಯರನ್ನುಳಿದು ಬೇರೆ ಯಾರಿಗೂ ಅವರ ಸಂಪತ್ತು ಎಷ್ಟೆಂಬದರ ಕಲ್ಪನೆ ಬರಲು ಸಾಧ್ಯವಿರಲಿಲ್ಲ. ಏಳೆಂಟು ಬ್ಯಾಂಕುಗಳೊಂದಿಗೆ ಅವರ ವ್ಯವಹಾರ ಸಾಗುತ್ತಿತ್ತು. ಯಾವುದೊಂದು ಬ್ಯಾಂಕಿಗೆ ಹೋಗಿ ರಾಯರು ಚೆಕ್ ಪುಸ್ತಕ ಹೊರದೆಗೆಯುತ್ತಲೂ ಈ ಆಸಾಮಿ ಕೇಳುವ ಹಣವೆಷ್ಟೋ ಎಂದು ಬ್ಯಾಂಕಿನವರು ದಿಗಿಲುಬೀಳುತ್ತಿದ್ದರು. ಪ್ರತಿಯೊಂದು ಬ್ಯಾಂಕಿನಲ್ಲಿ ಅವರ ಹೆಸರಿನಲ್ಲಿ ಲಕ್ಷಗಟ್ಟಲೆ ಹಣ!

ಲಕ್ಷ್ಮಿ, ಸರಸ್ವತಿಯರಿಬ್ಬರ ಕೃಪಾದೃಷ್ಟಿಗೂ ಪಾತ್ರರಾದ ಬಾಬೂರಾಯರನ್ನು ಕಂಡರೆ ಜನ ದಂಗಾಗಿ ಹೋಗುತ್ತಿತ್ತು. ಅವರ ಅಭಿಪ್ರಾಯಕ್ಕೆ ವಿರುದ್ಧ ಮಾತನಾಡುವ ಸಾಹಸ ಯಾರಿಂದಲೂ ಆಗುತ್ತಿರಲಿಲ್ಲ. ಮಹಾಮಹಾ ವಿದ್ವಾಂಸರೂ ಸಹ ಅವರನ್ನೆದುರಿಸಲು ಹಿಂಜರಿಯುತ್ತಿದ್ದರು. 'ಪಾಲಿಯಾಗ್ರಫಿ', 'ಆರ್ಕಿಯಾಲಜಿ' ಇತ್ಯಾದಿ ಶಾಸ್ತ್ರಗಳಲ್ಲಿ ಪ್ರಾವೀಣ್ಯತೆ ಪಡೆಯಬೇಕಾದರೆ ಹಲವು ಭಾಷೆಗಳ ಮೇಲೆ ಪ್ರಭುತ್ವ ದೊರಕಿಸಿಕೊಂಡಿರಬೇಕಾದುದು ಅಗತ್ಯ. ಬಾಬೂರಾಯರು ಆ ಪ್ರಭುತ್ವ ಸಂಪಾದಿಸಿದ್ದರಾದುದರಿಂದ ಅವರ ಅಭಿಪ್ರಾಯಗಳನ್ನು ಜನ ಕಣ್ಣು ಮುಚ್ಚಿಕೊಂಡು ಸ್ವೀಕರಿಸುತ್ತಿದ್ದರು.

ಐವತ್ತನೆಯ ವರ್ಷವನ್ನು ದಾಟಿದ್ದರೂ ಸಹ ಚಿಕ್ಕತನದಲ್ಲಿ ಮಾಡಿದ ಅಂಗಸಾಧನೆಯಿಂದಾಗಿ ರಾಯರ ದೇಹ ದೃಢವಾಗಿಯೆ ಇದ್ದಿತು. ಇಂದಿನ ಇಬ್ಬರು ತರುಣರನ್ನು ಮೀರಿಸಬಲ್ಲ ಶಕ್ತಿ ಅವರಲ್ಲಿದ್ದಿತು. ಸಂಪತ್ತು ಹಾಗೂ ವ್ಯಸನಗಳಿಗೆ ಬಹಳ ಅಂತರವೇನೂ ಇಲ್ಲ. ಆದರೂ ವ್ಯಸನ ರಾಯರಿಗೆ ಅಂಟಿಕೊಂಡಿರಲಿಲ್ಲ. ಇಪ್ಪತ್ತನೆಯ ಶತಮಾನದ ವೃದ್ಧರೂ ಸಹ ಮದುವಣಿಗರ ಹಾಗೆ ಮೆರೆಯಲಾಶಿಸುತ್ತಾರೆ. ಆದರೆ ಬಾಬೂರಾಯರು ಅಂಥವರಲ್ಲ. ಅವರ ವೇಷವೂ ತೀರ ಸಾಧಾರಣ ತರದ್ದು. ಹಳೆಯ ಮಾದರಿಯ ಅಂಗಿ, ಅಂಥದೇ ಕೋಟು, ಒಂದು ಧೋತರ. ಹೊರಗೆ ಹೊರಟಾಗ ತಲೆಗೊಂದು ರುಮಾಲು. ಮುಗಿಯಿತು.

ಆಧುನಿಕ ಕಾಲದ ಎರಡೇ ಎರಡು ವ್ಯಸನಗಳು ರಾಯರಿಗಂಟಿಕೊಂಡಿದ್ದವು. ವೃತ್ತಪತ್ರಿಕೆಗಳನ್ನೋದುವುದು ಅವರ ಮೊದಲನೆಯ ವ್ಯಸನ. ಮುಂಬಯಿ, ಪುಣೆ, ಕಲಕತ್ತೆ, ಮದ್ರಾಸ, ಬೆಂಗಳೂರು, ಲಾಹೋರ ಇತ್ಯಾದಿ ನಗರಗಳಲ್ಲೂ, ಪರದೇಶಗಳಲ್ಲೂ ಪ್ರಕಟವಾಗುವ ಹಲವಾರು ಬಗೆಯ ದೈನಿಕ ಸಾಪ್ತಾಹಿಕ, ಮಾಸಿಕ ಪತ್ರಿಕೆಗಳಿಗೆ ಅವರು ಕಾಯಂ ಚಂದಾದಾರರಾಗಿದ್ದರು. ಅವುಗಳನ್ನೋದುವುದರಲ್ಲಿಯೆ ಅವರ ಬೆಳಗಿನ ಕಾಲವೆಲ್ಲ ಕಳೆದು ಹೋಗುವುದು. ಸಾಮಾನ್ಯವಾಗಿ ಜನರು ಓದದಿರುವ ವಿಷಯಗಳನ್ನೂ ಲಕ್ಷ್ಯಪೂರ್ವಕವಾಗಿ ಅಭ್ಯಸಿಸುವರು.

ಅವರಿಗಂಟಿಕೊಂಡಿದ್ದ ಇನ್ನೊಂದು ವ್ಯಸನ ಸಿಗರೇಟಿನದು. ತುಂಬ ಬೆಲೆಬಾಳುವ ಮಧುರ ವಾಸನೆಯ ಸಿಗರೇಟುಗಳನ್ನು ದಿನವೂ ಸೇದುತ್ತಿದ್ದರು.

ಒಂದು ದಿನ ಬೆಳಗಿನ ಜಾವದಲ್ಲಿ ಬಾಬೂರಾಯರು ತಮ್ಮ ಲೈಬ್ರರಿಯಲ್ಲಿ ಆಗ ತಾನೆ ಬಂದ ಅಂಚೆಯನ್ನು ನೋಡುತ್ತ ಕುಳಿತುಕೊಂಡಿದ್ದರು. ಪತ್ರಗಳನ್ನೋದುತ್ತಿದ್ದ ಹಾಗೆ ಮಧ್ಯೆ ಮಧ್ಯೆ ಎದುರಿಗಿದ್ದ ಬಿಸ್ಕೀಟುಗಳನ್ನು ಒಂದೊಂದಾಗಿ ಬಾಯಿಗೆ ಹಾಕಿಕೊಳ್ಳುವುದೂ, ಆಗಾಗ ಸಿಗರೇಟಿನ ಹೊಗೆ ಎಳೆಯುವುದೂ ನಡೆದಿತ್ತು. ಓದಿ ಮುಗಿಸಿದ ವೃತ್ತಪತ್ರಿಕೆಗಳನ್ನೂ, ನೋಡಿದ ಪುಸ್ತಕಗಳನ್ನೂ ಮೇಜಿನ ಬಳಿಯಲ್ಲಿರುದ ಬುಟ್ಟಿಯಲ್ಲಿ ಎಸೆದು ಬಿಡುವುದು ಅವರ ಚಟ. ಆ ಸಮಯದಲ್ಲಿ ಆ ಬುಟ್ಟಿಯೆಲ್ಲ ತುಂಬಿ ಹೋಗಿ

ದ್ದಿತು. ಅದನ್ನು ಬರಿದು ಮಾಡುವ ಕೆಲಸಕ್ಕಾಗಿಯೆ ಒಬ್ಬ ಆಳುಮನುಷ್ಯ ನನ್ನು ಅವರು ನಿಯಮಿಸಿಕೊಂಡಿದ್ದರು.

ಓದುತ್ತಿದ್ದ ಹಾಗೆ ರಾಯರ ದೃಷ್ಟಿ ವೃತ್ತಪತ್ರಿಕೆಯ ಒಂದು ಕಾಲಮಿನ ಮೇಲೆ ಸ್ಥಿರವಾಯಿತು. ರಾಜಕೀಯ ಸಮಾಚಾರವಾವುದೂ ಅವರ ಚಿತ್ತವನ್ನು ಸೆಳೆದಿರಲಿಲ್ಲ. ಅವರು ಓದುತ್ತಿದ್ದುದು ರಾಜಕೀಯ ಪತ್ರಿಕೆಯೂ ಅಲ್ಲ. ಮುಂಬಯಿಯಿಂದ ಪ್ರಕವಾಗುವ 'ಜ್ಯುವೆಲರ್ಸ್ ಜರ್ನಲ್' ಅವರ ಕೈಯಲ್ಲಿದ್ದಿತು ಅದರಲ್ಲಿ ಅಚ್ಚಾದ ಒಂದು ಪ್ರಕಟನೆಯಿಂದಾಗಿ ಅವರ ಚಿತ್ತ ಅಲ್ಲಿ ಸ್ಥಿರವಾಗಿದ್ದಿತು.

**“ ರಾಜಮನೆತನದ ಪುರಾತನ ರತ್ನದೊಡವೆಗಳ ಮಾರಾಟ. ”**

ಉತ್ತರ ಹಿಂದುಸ್ತಾನದಲ್ಲಿನ........ಪುರ ಸಂಸ್ಥಾನದ ರಾಜಮನೆತನದ ಪುರಾತನ ರತ್ನದೊಡವೆಗಳ ಮಾರಾಟ ಮುಂಬಯಿಯ ಪೇಟೆಯಲ್ಲಿ ಖಾಸಗೀ ರೀತಿಯಿಂದ ನಡೆಯಲಿದೆಯೆಂದು ಅಧಿಕೃತವಾಗಿ ತಿಳಿದುಬಂದಿದೆ.

ಆ ಸಂಸ್ಥಾನದಲ್ಲಿ ನಡೆಯಬೇಕಾದ ಹಲವು ಸುಧಾರಣೆಯ ಕೆಲಸ ಕಾರ್ಯಗಳಿಗಾಗಿ ಭಾರಿ ಹಣದ ಅಗತ್ಯವಿದೆ. ಅದಕ್ಕಾಗಿ ಸಾಲ ತೆಗೆದು ಅದರ ಬಡ್ಡಿಯ ಹಣದ ಭಾರವನ್ನು ಪ್ರಜೆಗಳ ಮೇಲೆ ಹೊರಿಸಲು ರಾಜರಿಗಿಷ್ಟವಿಲ್ಲ. ಅಂತೆಯೆ ಉದಾರ ಸ್ವಭಾವದ ಮಹಾರಾಜರು ತಮ್ಮ ಖಾಸಗೀ ಭಾಂಡಾರದಲ್ಲಿನ ರತ್ನದೊಡವೆಗಳನ್ನು ಮಾರಿಬಿಡಲು ನಿರ್ಧರಿಸಿರುವುದು ಅತ್ಯಂತ ಸ್ತುತ್ಯವಾದುದು. ಸಂಸ್ಥಾನದಲ್ಲಿ ನಡೆಯಬೇಕಾದ ಕೆಲಸಕಾರ್ಯಗಳ ಯೋಜನೆಯನ್ನು ಇಂಜನೀಯರುಗಳು ಈಗಾಗಲೆ ತಯಾರಿಸಿದ್ದಾರೆ. ಅದಕ್ಕೆ ಅಗತ್ಯವಿರುವ ಹಣವನ್ನು ಒಂದುಗೂಡಿಸುವದಕ್ಕಾಗಿ ಈ ಒಡವೆಗಳನ್ನು ಮುಂಬಯಿಗೆ ಕಳುಹಿಸಲಾಗಿದೆ. ಅಲ್ಲಿ ಈ ಒಡವೆಗಳು ಯಾರ ಮೂಲಕ ಮಾರಾಟವಾಗುವವೆಂಬುದು ಮಾತ್ರ ಇನ್ನೂ ತಿಳಿದು ಬಂದಿಲ್ಲ. ಆದರೂ ಮಾರಾಟವಾಗಲಿರುವ ಒಡವೆಗಳ ಪಟ್ಟಿಯನ್ನು ಪ್ರಕಟನೆಗಾಗಿ ನಮ್ಮ ಕಡೆಗೆ ಕಳಿಸಲಾಗಿದೆ. ಅವುಗಳನ್ನು ಮಾರುವ ವ್ಯಾಪಾರಸ್ಥರ ಹೆಸರು

ವಿಳಾಸಗಳನ್ನೂ, ಇತರ ವಿವರಗಳನ್ನೂ ವಿಶೇಷ ಪುರವಣಿಯೊಂದನ್ನು ತೆಗೆದು ಪ್ರಕಟಿಸಲಾಗುವದು. ಒಡವೆಗಳ ವಿವರಗಳು :

**ಮುತ್ತುಗಳ ಹಾರಗಳು ೪ :** ಅತ್ಯಂತ ತೇಜಸ್ವಿಯಾದವುಗಳು. ಸ್ವಚ್ಛ ಹಾಗೂ ದುಂಡಗಿನ ಮುತ್ತುಗಳು. ಬೆಲೆ ಸಮವಾಗಿ ಪ್ರತಿಯೊಂದಕ್ಕೂ ಮೂರು ಲಕ್ಷ ರೂಪಾಯಿಗಳು.

**ಮುತ್ತು, ರತ್ನ, ಮಾಣಿಕ್ಯಗಳನ್ನು ಕೆತ್ತಿದ ಒಡ್ಯಾಣ ೧.** ಬೆಲೆ ಸಮವಾಗಿ ಹತ್ತು ಲಕ್ಷ ರೂಪಾಯಿಗಳು.

ಇಂದ್ರನೀಲದ ರಾಮ, ಎತ್ತರ ಎರಡು ಇಂಚು; ಮಾಣಿಕ್ಯದ ಸೀತಾದೇವಿ, ಎತ್ತರ ಒಂದೂಮುಕ್ಕಾಲು ಇಂಚು; ಪುಷ್ಪರಾಜದ ಲಕ್ಷ್ಮಣ ಹಾಗೂ ಸುವರ್ಣಖಚಿತವಾದ ಇತರ ಮೂರ್ತಿಗಳು. ಬೆಲೆಯನ್ನು ಹಿಂದಿನಿಂದ ತಿಳಿಸಲಾಗುವುದು.

ತಟ್ಟೆಗಳು, ಪಣತಿಗಳು, ಚದುರಂಗಗಳು, ಗಂಟೆಗಳು ಇತ್ಯಾದಿ ಚಿನ್ನದ ವಸ್ತುಗಳನ್ನು ಸದ್ಯದ ಚಿನ್ನದ ಬೆಲೆಯ ಮೇರೆಗೆ ಕೊಡಲಾಗುವುದು. ಬೇರೆ ಬೇರೆ ಬಗೆಯ ನೂರಾರು ರತ್ನದುಂಗುರಗಳನ್ನು ಸದ್ಯದ ರತ್ನದ ಬೆಲೆಯ ಮೇರೆಗೆ ಕೊಡಲಾಗುವುದು. ಕೇರಭೂಷಣ, ಕುಂಡಲ, ಕವಚ ಇತ್ಯಾದಿ ಪೌರಾಣಿಕ ವಸ್ತುಗಳನ್ನೂ ಬೆಲೆ ಕಟ್ಟಿ ಕೊಡಲಾಗುವದು.

ರತ್ನಗೋಲ : ಇದೇ ಅತಿ ಮಹತ್ವದ ಹಾಗೂ ಅತಿಮೌಲ್ಯದ ವಸ್ತು. ಇದಷ್ಟು ಬೆಲೆ ಬಾಳುವ, ಅತಿ ಪುರಾತನ ಹಾಗೂ ಅತ್ಯುತ್ಕೃಷ್ಟ ಕಲಾಕೌಶಲ್ಯದ ವಸ್ತು ಇಡೀ ಜಗತ್ತಿನಲ್ಲೇ ಇನ್ನೊಂದಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು ಪೃಥ್ವಿಯ ಆಕಾರದ ಈ ಗುಂಡು ಅಚ್ಚ ಚಿನ್ನದಿಂದ ತಯಾರಿಸಲ್ಪಟ್ಟದ್ದಿದ್ದು ಅದ ತರೂಕ ನಾಲ್ಕು ಸಾವಿರ ತೊಲೆಗಳಷ್ಟಿದೆ. ಅದರ ಮೇಲೆ ಅನೇಕ ಆಕೃತಿಗಳನ್ನು ರತ್ನ ಖಚಿತ ರೇಖೆಗಳಿಂದ ಚಿತ್ರಿಸಲಾಗಿದೆ. ಈ ರತ್ನಗಳ ಬೆಲೆಯ ಮುಂದೆ ನಾಲ್ಕು ಸಾವಿ ಚಿನ್ನದರ ಬೆಲೆ ತೀರ ಸಣ್ಣದು. ಈ ರತ್ನಗೋಲ ತಯಾರಿಸಲ್ಪಟ್ಟಾಗ ಆರ್ಯರು ಸುಧಾರಣೆ ಹಾಗೂ ಸಂಸ್ಕೃತಿ

ಗಳ ಅತ್ಯುಚ್ಚ ಶಿಖರವನ್ನೇರಿದ್ದರು. ಅವರ ಬುದ್ಧಿ, ಕಲಾಕೌಶಲ್ಯ ಹಾಗೂ ಜ್ಞಾನಗಳ ಮೂರ್ತಿಮಂತ ಸ್ವರೂಪವೆಂದರೇನೆ ಈ ರತ್ನಗೋಲ. ನಾವು ವಾಸಿಸುವ ಈ ಪೃಥ್ವಿ ಗೋಲಾಕಾರವಾಗಿದ್ದು, ಎರಡೂ ಧ್ರುವಗಳ ಬಳಿ ಚಪ್ಪಟೆಯಾಗಿದೆಯೆಂಬ ವಿಚಾರ ಪ್ರಾಚೀನ ಆರ್ಯರಿಗೆ ತಿಳಿದಿತ್ತು. ಆರ್ಯರ ವಸಾಹತುಗಳು ಹಿಂದೀ ಮಹಾಸಾಗರದಲ್ಲೂ, ಯುರೋಪಿನಲ್ಲೂ ಪಸರಿಸಿದ್ದವು. ಸಾಗರ ಪ್ರಯಾಣದಿಂದಾಗಿ ಅವರಿಗೆ ಭೂಗೋಲದ ಮೇಲಿನ ದೇಶಗಳ ಸ್ಪಷ್ಟ ಕಲ್ಪನೆ ಬಂದಿತ್ತು. ಪುರಾಣಗಳಲ್ಲಿ ಉಲ್ಲೇಖಿಸಲ್ಪಟ್ಟ ಖಂಡಗಳು ಆಗ ನಿಜಕ್ಕೂ ಅಸ್ತಿತ್ವದಲ್ಲಿದ್ದವೆಂಬುದರ ಪ್ರತ್ಯಕ್ಷ ಆಧಾರ ಈಗ ಜಗತ್ತಿನೆದುರಿಗೆ ಈ ರತ್ನಗೋಲದ ರೂಪದಲ್ಲಿ ಆ ಖಂಡಗಳ ಸೀಮೆಗಳನ್ನು ನಿರ್ಣಯಿಸುವದಕ್ಕೂ ಈ ಗೋಲದಿಂದ ತುಂಬ ಉಪಯೋಗವಾದೀತು. ಇದರ ನಿರ್ಮಾಣವಾದುದು ಯಾವ ಕಾಲದಲ್ಲಿ ಎಂಬುದು ಯಾರಿಗೂ ತಿಳಿದಿಲ್ಲ. ಆದರೆ ಆರ್ಯಭಟ್ಟ, ವರಾಹಮಿಹಿರ, ಭಾಸ್ಕರಾಚಾರ್ಯ ಇತ್ಯಾದಿ ಜ್ಯೋತಿರ್ವಿದರು ಇದರ ಅಥವಾ ಇಂತಹ ರತ್ನಗೋಲಗಳ ಉಲ್ಲೇಖ ಮಾಡಿದ್ದಾರೆ. ಈ ಗೋಲದ ಬಗ್ಗೆ ಉಪಲಬ್ಧವಿರುವ ಐತಿಹಾಸಿಕ ಸಂಗತಿಯಿಷ್ಟೆ. ಪ್ರಾಚೀನ ಸಮ್ರಾಟನೊಬ್ಬ ಅದನ್ನು ಸೋಮನಾಥ ಮಂದಿರಕ್ಕೆ ಕಾಣಿಕೆಯಾಗಿ ಕೊಟ್ಟಿದ್ದ. ಲೂಟಿಯಲ್ಲಿ ಗಜನಿ ಮಹಮ್ಮದನಿಗೆ ಅದು ಲಭ್ಯವಾಯಿತು. ಆದರೆ ಅವನ ಸೈನ್ಯ ಅಫಘಾನಿಸ್ತಾನಕ್ಕೆ ಮರಳಿ ಹೋಗುತ್ತಿದ್ದಾಗ ದಾರಿಯಲ್ಲಿ ನಮ್ಮ ಈ ಮಹಾರಾಜರು ಪೂರ್ವಜರು ಅವರ ಮೇಲೆ ದಾಳಿ ನಡೆಸಿದರು. ಆ ಗಲಾಟೆಯಲ್ಲಿ ಈ ರತ್ನಗೋಲ ಸಂಸ್ಥಾನಕ್ಕೆ ದೊರೆಯಿತು. ಈ ಅಪೂರ್ವ ವಸ್ತುವನ್ನು ಕೊಂಡುಕೊಳ್ಳುವ ಲೋಭದಿಂದ ದೇಶ ವಿದೇಶಗಳ ರಾಜ ಮಹಾರಾಜರುಗಳು ಹಾಗೂ ಸಂಗ್ರಹಾಲಯಗಳ ಪ್ರತಿನಿಧಿಗಳು ಮಹಾರಾಜರ ಬಳಿಗೆ ಬಂದಿದ್ದರು, ಆದರೆ ಇಷ್ಟೊಂದು ಅವಾಢವ್ಯ ಬೆಲೆ ಕೊಟ್ಟು ಅದನ್ನು ಕೊಳ್ಳುವ ಧೈರ್ಯ ಸಾಲದೆ ಮರಳಿ ಹೋದರು. ಪ್ರಜೆಗಳ ಹಿತದ ವಿಚಾರ ಮುಂದೆ ಬಂದಿರದಿದ್ದರೆ ಈಗಲೂ ಸಹ ಅದನ್ನು ಮಾರಲು ಕೊಡುವ ಇಷ್ಟ ರಾಜರಿಗಿರಲಿಲ್ಲ. ಈ ರತ್ನಗೋಲವನ್ನು ಈಗಿದ್ದ ಸ್ಥಿತಿಯಲ್ಲಿ ಪೂರ್ಣರೂಪದಲ್ಲಿ ಯಾರೂ ಕೊಂಡುಕೊಳ್ಳಲು ಸಾಧ್ಯವಾಗದೆ ಹೋದರೆ ಅದರ ಮೇಲಿನ ರತ್ನಗಳನ್ನು ಬಿಡಿಸಿ ಅವುಗಳನ್ನೂ, ಚಿನ್ನವನ್ನೂ

ಬಿಡಿ ಬಿಡಿಯಾಗಿ ವಿಕ್ರಯಿಸಲಾಗುವುದು. ರತ್ನಗಳನ್ನು ಬಿಡಿಸುವದಕ್ಕೆ ಮೊದಲು ಅದರ ಪ್ರತಿ ಚಿತ್ರವನ್ನು ತೆಗೆದಿರಿಸಲಾಗುವುದು. ಈ ರತ್ನಗೋಲದ ಬೆಲೆ ಸುಮಾರು ಒಂದು ಕೋಟಿ ರೂಪಾಯಿಗಳು. ”

ಈ ಪ್ರಕಟನೆಯನ್ನೋದುತ್ತಿದ್ದ ಹಾಗೆ ಬಾಬೂರಾಯರ ಕಣ್ಣು ವಿಲಕ್ಷಣ ತೇಜಸ್ಸಿನಿಂದ ಹೊಳೆಯುತ್ತಿದ್ದವು. ಕೈಯಲ್ಲಿದ್ದ ಪತ್ರಿಕೆಯನ್ನು ಬದಿಗಿರಿಸಿ ಒಂದೆರಡು ಸಲ ಸಿಗರೇಟಿನ ಹೊಗೆ ಎಳೆದು ವಿಚಾರ ಮಗ್ನರಾದಾಗ ರಾಯರಿಗೆ ಏನೋ ನೆನವು ಬಂತು. ಲೈಬ್ರರಿಯಲ್ಲಿ ಅತ್ತ ಇತ್ತ ಒಂದೆರಡು ಸಲ ಶತಪಥ ಹಾಕಿದ ಬಳಿಕ ಅವರು ಒಂದು ಕಪಾಟಿನ ಹತ್ತಿರ ನಿಂತುಕೊಂಡರು. ಆ ಕಪಾಟಿನಲ್ಲಿ ಅನೇಕ ವಸ್ತುಗಳು ಅಸ್ತವ್ಯಸ್ತವಾಗಿ ಬಿದ್ದಿದ್ದವು. ಆದರೆ ಆ ಅವ್ಯವಸ್ಥೆಯ ವ್ಯವಸ್ಥಿತ ವಿವರಗಳೆಲ್ಲ ರಾಯರ ತಲೆಯಲ್ಲಿದ್ದುದರಿಂದ ಕಪಾಟಿನಲ್ಲಿನ ಮೇಲಿನ ಅಂಕಣದಿಂದ ಉಕ್ಕಿನ ಪೆಟ್ಟಿಗೆಯೊಂದನ್ನು ಎತ್ತಿಕೊಂಡು ಅದನ್ನು ಮೇಜಿನ ಮೇಲಿರಿಸಿದರು. ಅನಂತರ ಬೇರೆಯೊಂದು ಕಪಾಟಿನಿಂದ ಇನ್ನೊಂದು ಪೆಟ್ಟಿಗೆಯನ್ನು ತೆಗೆದುಕೊಂಡರು. ಮೇಜಿನ ಮೇಲಿದ್ದ ಗಂಟೆಯನ್ನು ಬಾರಿಸಿ ಸೇವಕನನ್ನು ಕೂಗಿ ಉಪಹಾರದ ವಸ್ತುಗಳನ್ನು ತ್ವರೆಯಾಗಿ ತರಲು ಆಜ್ಞಾಪಿಸಿದನು. ಆ ಎರಡು ಪೆಟ್ಟಿಗೆಗಳ ಮುಚ್ಚಳ ತೆರೆದು ಅವುಗಳಲ್ಲಿನ ಕಾಗದ ಪತ್ರಗಳನ್ನು ಹೊರದೆಗೆದರು.

ಬಹುಮೂಲ್ಯ ಪುರಾತನ ವಸ್ತುಗಳು ದೊರೆಯುವ ಸಂಭವ ವಿದ್ದಾಗಲೆಲ್ಲ ರಾಯರಿಗೆ ಒಡನೆಯೆ ವಿಪರೀತ ಹಸಿವೆಯಾಗುತ್ತಿತ್ತು. ಅದರೊಂದಿಗೆ ಸಿಗರೇಟಿನ ಮೇಲೆ ಸಿಗರೇಟು ಸುಡುತ್ತಿತ್ತು.

ಗಂಗೋತ್ರಿಯ ಅಕ್ಕಪಕ್ಕದ ಐವತ್ತು ಮೈಲಿ ಅಗಲ ಹಾಗೂ ಎರಡು ನೂರ ಮೈಲಿ ಉದ್ದವಾದ ಸ್ಥಳಕ್ಕೆ ಮುಸಲ್ಮಾನರು ಪ್ರವೇಶಿಸಿರಲಿಲ್ಲವಾದುದರಿಂದ ಅಲ್ಲಿಯ ಪುರಾಣ ಕ್ಷೇತ್ರಗಳು ಈಗಲೂ ಅಚ್ಚಳಿಯದಂತಿವೆ. ಬ್ರಿಟಿಷರ ರಾಜ್ಯಯಂತ್ರವೂ ಈ ಪ್ರದೇಶದ ಮೇಲೆ ಸಾಕಷ್ಟು ಓಡಿರಲಿಲ್ಲವಾದ್ದರಿಂದ ಈ ಸ್ಥಳದ ಐತಿಹಾಸಿಕ ಸಮಾಚಾರವಿನ್ನೂ ಜಗತ್ತಿನೆದುರಿಗೆ ಬಂದಿರಲಿಲ್ಲ. ಪ್ರಾಚೀನ ಕಾಲದಿಂದಲೂ ಇಲ್ಲಿ ಆರ್ಯರು ವಾಸಿಸುತ್ತಿದ್ದರು.

ಈಗಲೂ ಜಿಲ್ಲೆಯ ನಿವಾಸಿಗಳ ಬಳಿ ಅನೇಕ ಪುರಾತನ ಹಾಗೂ ಬಹುಮೂಲ್ಯ ವಸ್ತುಗಳುಂಟು. ಪ್ರಾಚೀನ ವಸ್ತುಸಂಗ್ರಹದ ಗೀಳು ಹಿಡಿದುಕೊಂಡ ಬಳಿಕ ಬಾಬೂರಾಯರು ಆ ಕೆಲಸಕ್ಕಾಗಿ ಬೇರೆ ಬೇರೆ ಕಡೆಗಳಲ್ಲಿ ಸಂಚರಿಸಿದ್ದರು. ಜ್ಞಾನದ ಜತೆಗೆ ಅವರಿಗೆ ಈ ಸಂಚಾರದಲ್ಲಿ ಅನೇಕ ಬಹುಮೂಲ್ಯ ವಸ್ತುಗಳೂ ದೊರೆತಿದ್ದವು. ಆನುವಂಶಿಕ ಸಂಸ್ಕಾರಗಳು ಒಮ್ಮೆಲೆ ಮಾಯವಾಗುವದಿಲ್ಲವಷ್ಟೆ. ಅಂತೆಯೆ ತಮ್ಮ ಪೂರ್ವಜರ ಸುಲಿಗೆಗಾರಿಕೆಯ ವೃತ್ತಿ ಬಾಬೂರಾಯರಲ್ಲೂ ಉಳಿದುಕೊಂಡಿದ್ದಿತು. ತಮ್ಮ ಮನವನ್ನು ಸೆಳೆದ ಯಾವುದೊಂದು ವಸ್ತು ಯೋಗ್ಯ ಬೆಲೆಗೆ ದೊರೆಯದಂತಾದಾಗ ಅವರು ಶಿಷ್ಟ, ದುಷ್ಟ ಉಪಾಯಗಳನ್ನೆಲ್ಲ ಹೂಡಿ ಹೇಗಾದರೂ ಮಾಡಿ ಅದನ್ನು ಸಂಪಾದಿಸಿಕೊಂಡೇ ತರುತ್ತಿದ್ದರು. ಅದಕ್ಕಾಗಿ ಅಡ್ಡದಾರಿ ತುಳಿಯಲೂ ಅವರ ಹಿಂಜರಿಯುತ್ತಿರಲಿಲ್ಲ. ಈ ತರದ ವರ್ತನೆಯಿಂದ ಅನೇಕ ಬಾರಿ ಕಾನೂನಿನ ಹಿಡಿತಕ್ಕೆ ಸಿಗುವ ಪ್ರಸಂಗವೂ ಅವರ ಮೇಲೆ ಬಂದಿದ್ದಿತು. ಆದರೆ ನ್ಯಾಯದೇವತೆಯ ಬಾಗಿಲಲ್ಲಿನ ನಾಯಿಗಳು ಲಂಚಗುಳಿತನಕ್ಕೊಳಗಾಗುತ್ತಿದ್ದುದರಿಂದ ರಾಯರ ಸ್ವಾತಂತ್ರ್ಯಕ್ಕಾಗಲಿ ಮರ್ಯಾದೆಗಾಗಲಿ ಯಾವ ಆತಂಕವೂ ಬಂದೊದಗಿರಲಿಲ್ಲ.

ಬಾಬೂರಾಯರು ಕಪಾಟಿನಿಂದ ಹೊರದೆಗೆದ ಪೆಟ್ಟಿಗೆಗಳಲ್ಲಿಯ ಕಾಗದ ಪತ್ರಗಳು ಮೇಲೆ ಉಲ್ಲೇಖಿಸಿದ ಪ್ರದೇಶದಲ್ಲಿ ಅವರಿಗೆ ದೊರೆತಿದ್ದವು. ಅವುಗಳ ಮೇಲೆ ದೃಷ್ಟಿ ಹಾಯಿಸಿದ ತರುವಾಯ ಅವರು ಕಾಗದಗಳ ಪುಡಿಕೆಯೊಂದನ್ನು ಬಿಚ್ಚಿ ಅದರಲ್ಲಿನ ನಕಾಶಗಳನ್ನು ಹೊರದೆಗೆದರು. ಹಿಂದೂ ದೇಶದಲ್ಲಿ ಹಿಂದೆ ಬಳಕೆಯಲ್ಲಿದ್ದ ಹಾಗೂ ಇಂದು ಬಳಕೆಯಲ್ಲಿರುವ ಬೇರೆ ಬೇರೆ ಭಾಷೆಗಳನ್ನು ಕನ್ನಡಕ್ಕಿಳಿಸಲು ಬಾಬೂರಾಯರು ಖಾಸಗೀ ರೀತಿಯಿಂದ ತಯಾರಿಸಿದ ನಕಾಶಗಳವು. ಮೂಲ ಲೇಖ ಯಾವ ಲಿಪಿಯಲ್ಲಿರುವುದೂ, ಆ ಲಿಪಿಯ ನಕಾಶವನ್ನು ಎದುರಿಗಿಟ್ಟುಕೊಂಡೊಡನೆ ಆ ಲೇಖದ ರಹಸ್ಯವೆಲ್ಲ ಬಯಲಾಗುವಂತಿತ್ತು ಆ ನಕಾಶದಿಂದ.

ನಕಾಶಗಳನ್ನೂ, ಕಾಗದ ಪತ್ರಗಳನ್ನೂ ಅವಲೋಕಿಸಿದ ತರುವಾಯ ರಾಯರು ಉಪಹಾರಕ್ಕೆ ತೊಡಗಿದರು. ಅಭ್ಯಾಸದಲ್ಲಿ ತಮ್ಮ ಚಿತ್ತ ತೊಡಗಿ

ದಾಗ ಅವರಿಗೆ ಯಾವುದರ ಅರಿವೂ ಇರುತ್ತಿರಲಿಲ್ಲ. ಅಂಥ ಸಮಯದಲ್ಲಿ ಅವರು ಯಾರನ್ನೂ, ಎಂಥ ಮಹತ್ವದ ಕೆಲಸವಿದ್ದರೂ ಭೆಟ್ಟಿಯಾಗುತ್ತಿರಲಿಲ್ಲ. ಉಪಹಾರದ ತಟ್ಟೆಯನ್ನೆತ್ತಿಕೊಂಡು ಹೋಗಲು ಬಂದ ಸೇವಕನಿಗೆ ಆ ಬಗ್ಗೆ ಕಟ್ಟಾಜ್ಞೆ ವಿಧಿಸಿ ಅವರು ಇತಿಹಾಸ ಸಂಶೋಧನೆಯಲ್ಲಿ ಮಗ್ನರಾದರು.

ಮಧ್ಯಾಹ್ನ ಎರಡು ಗಂಟೆಯಾದರೂ ಅವರ ವಾಚನ ಮತ್ತು ಲೇಖನ ಹಾಗೇ ಸಾಗಿತ್ತು. ನಕಾಶಗಳ ಸಹಾಯದಿಂದ ಅವರು ಹಲವು ಹಳೆಯ ಲೇಖನಗಳನ್ನು ಭಾಷಾಂತರಿಸಿದರು. ಲೈಬ್ರರಿಯಲ್ಲಿದ್ದ ಅನೇಕ ತಾಮ್ರಪಟ, ಶಿಲಾಲೇಖ ಹಾಗೂ ಪುಸ್ತಕಗಳನ್ನು ಅವಲೋಕಿಸಿದರು. ಈ ಅಭ್ಯಾಸದಿಂದ ಅವರಿಗಾವ ಪ್ರಯೋಜನವಾಯಿತೆಂಬುದನ್ನು ವಿಸ್ತೃತವಾಗಿ ಹೇಳಲು ಇಲ್ಲಿ ಸಾಧ್ಯವಿಲ್ಲ. ಇದು ಸಮಯವೂ ಅಲ್ಲ. ಭಾಷಾಂತರದ ಕೆಲಸ ನಡೆದಿದ್ದಾಗ ಅವರು ಮತ್ತೆ ಮತ್ತೆ ರತ್ನಗೋಲದ ಪ್ರಕಟನೆಯ ಕಡೆಗೆ ದೃಷ್ಟಿ ಹೊರಳಿಸುತ್ತಿದ್ದರು. ಅದರಿಂದಾಗಿ ಅವರು ಈ ಬಗ್ಗೆ ತಮ್ಮಲ್ಲಿದ್ದ ಎಲ್ಲ ವಿವರಗಳನ್ನು ಒಂದುಗೂಡಿಸುತ್ತಿದ್ದರೆಂದು ಸಹಜವಾಗಿಯೆ ತರ್ಕಿಸಲು ಸಾಧ್ಯವಾದೀತು.

ರತ್ನಗೋಲದ ನಿಜವಾದ ಯೋಗ್ಯತೆಯೇನು, ಬೆಲೆ ಎಷ್ಟು ಅದರ ರಹಸ್ಯವೇನು ಎಂಬುದರ ಸ್ಪಷ್ಟ ಕಲ್ಪನೆ ಅವರಿಗೆ ಅಗತ್ಯವಾಗಿತ್ತು. ಆಗಿನ ಅವರ ಮುಖಮುದ್ರೆಯನ್ನು ಕಂಡರೆ ಈ ವಿವರಗಳೆಲ್ಲ ಅವರಿಗೆ ತಿಳಿದು ಬಂದಿದ್ದವೆಂದೂ ಊಹಿಸಲು ಸಾಧ್ಯವಿತ್ತು. ಮಧ್ಯಾಹ್ನ ಎರಡೂವರೆ ಗಂಟೆಯ ಸಮಯವಾದಾಗ ಕೆಲಸವನ್ನು ಮುಗಿಸಿ ರಾಯರು ಕಾಗದಪತ್ರಗಳನ್ನೂ ನಕಾಶಗಳನ್ನೂ ಎತ್ತಿ ಅವುಗಳ ಸ್ಥಳದಲ್ಲಿರಿಸುವಾಗ ಅವರಿಗೆ ಅತ್ಯಾನಂದವಾಗಿದ್ದಿತೆಂಬುದು ಸ್ಪಷ್ಟವಾಗಿದ್ದಿತು. ರತ್ನಗೋಲದ ಕನಿಷ್ಟ ಬೆಲೆಯ ಬಗ್ಗೆ ಪ್ರಕಟವಾದ ಹಣವನ್ನು ಕೊಟ್ಟು ಅದನ್ನು ಕೊಳ್ಳುವುದರಲ್ಲಿ ಹಾನಿಯೇನೂ ಇಲ್ಲವೆಂಬ ನಿರ್ಧಾರಕ್ಕೆ ಅವರು ಬಂದಿದ್ದರು. ತಮ್ಮ ಹತ್ತಿರ ಇರುವ ಕಾಗದಪತ್ರಗಳಲ್ಲಿ ಉಲ್ಲೇಖಿಸಲ್ಪಟ್ಟ ರತ್ನಗೋಲ ಇದೇ ಆಗಿದ್ದಲ್ಲಿ ಖಂಡಿತವಾಗಿಯೂ ದೊರಕಿಸಿಕೊಂಡು ತಮ್ಮ ಸಂಪತ್ತನ್ನು ದ್ವಿಗುಣಿತ

ಗೊಳಿಸಿಕೊಳ್ಳಲೇಬೇಕೆಂದು ಅವರು ಮನಸ್ಸು ಮಾಡಿದ್ದರು. ಕಾಗದಪತ್ರಗಳ ಪೆಟ್ಟಿಗೆಗಳನ್ನು ಕಪಾಟಿನಲ್ಲಿಟ್ಟ ತರುವಾಯ ಅವರು ಭಾಷಾಂತರ ಮಾಡಿದ ಕಾಗದಗಳನ್ನೆಲ್ಲ ಸುಟ್ಟುಬಿಟ್ಟರು. ಈ ಬಗ್ಗೆ ಯಾವುದೇ ಬಗೆಯ ವಿವರವೂ ಬೇರೆಯವರಿಗೆ ತಿಳಿಯಕೂಡದೆಂದು ಅವರು ಬೂದಿಯನ್ನು ತುಳಿದು ಒರೆಸಿಬಿಟ್ಟರು. ಪತ್ರವ್ಯವಹಾರದ ಪೆಟ್ಟಿಗೆಯಿಂದ ತಾರಿನದೊಂದು ಫಾರ್ಮು ತೆಗೆದುಕೊಂಡು ಅದರ ಮೇಲೆ ಹೀಗೆ ಅರ್ಥ ಬರುವ ಹಾಗೆ ಬರೆದರು.

'ಯಶವಂತ ಧನಾಜಿ. ಗಿರಗಾಂವ-ನಿವಾಸ, ಮುಂಬಯಿ.
ತಕ್ಷಣ ಭೆಟ್ಟಿಗೆ ಬಾ'

ಬರೆದು ಮುಗಿಸಿದ್ದಾದ ಬಳಿಕ ಅವರು ಗಂಟೆ ಬಾರಿಸಿ ಸೇವಕನನ್ನು ಕೂಗಿ ಅರ್ಜಂಟ್ ತಾರು ಕಳುಹಿಸಲು ಆಜ್ಞೆ ವಿಧಿಸಿದರು. ಆತ ಹೋದ ತರುವಾಯ ಕೆಲಕಾಲ ಸ್ವಸ್ಥವಾಗಿ ಕುಳಿತಿದ್ದರು. ರತ್ನಗೋಲವನ್ನು ಸಂಪಾದಿಸಬೇಕೆಂಬ ಗುಂಗು ಅವರ ತಲೆಯಲ್ಲಿನ್ನೂ ತುಂಬಿದ್ದಿತು. ಕಾರಣವೇನೂ ಇಲ್ಲದಿದ್ದರೂ ಅವರು ಲೈಬ್ರರಿಯಲ್ಲಿ ಶತಪಥ ಹಾಕುತ್ತಿದ್ದರು. ಮಧ್ಯೆ ಮಧ್ಯೆ ಆನಂದದಿಂದ ಕೈ ಹಿಸುಕಿಕೊಳ್ಳುತ್ತಿದ್ದರು. ಅವರ ಮನಸ್ಸು ಆಗ ತುಂಬ ಉತ್ತೇಜಿತವಾಗಿದ್ದಿತಾದುದರಿಂದ ಅವರ ತಲೆಯಲ್ಲಿ ನಡೆದ ವಿಚಾರಗಳು ಶಬ್ದರೂಪವಾಗಿ ಹೊರಗೆ ಬರುತ್ತಿದ್ದವು.

"ಯಶವಂತ ಧನಾಜಿ, ಖಂಡೂ ಸಂತಾಜಿ ಮತ್ತು ಭೀಮಾಜಿ ಈ ತ್ರಿಮೂರ್ತಿಗಳಿಂದ ನನ್ನ ಕೆಲಸ ಖಂಡಿತ ಯಶಸ್ವಿಯಾಗುವದು. ಈ ಕೆಲಸವೊಂದನ್ನವರು ಮಾಡಿಕೊಟ್ಟರಾಯಿತು ಅನಂತರ ನಾನವರನ್ನು ಬಿಟ್ಟು ಬಿಡುತ್ತೇನೆ. ಆಮೇಲೆ ತಮಗೆ ತಿಳಿದಲ್ಲಿಗೆ ಹೋಗಲಿ. ಬಿಡುವಿರುವ ವರೆಗೂ ಸುಖದಿಂದ ಊಟ ಮಾಡಿಕೊಂಡಿರಲಿ. ಧನಾಜಿ ಬರುವುದರೊಳಗಾಗಿ ಇನ್ನುಳಿದ ಸಿದ್ಧತೆಯೆಲ್ಲ ಆಗಬೇಕು. ಮಾಡಬೇಕಾದ ಕೆಲಸದ ಬಗ್ಗೆ ಪೂರ್ಣ ವಿವರಗಳು ತಿಳಿಯದೆ, ಸರಿಯಾದ ಸಿದ್ಧತೆಯಾಗದೆ ಯಾವುದೂ ಯಶಸ್ವಿಯಾಗುವುದಿಲ್ಲ."

ತಮ್ಮ ಊಟವಿನ್ನೂ ಆಗಿಲ್ಲವೆಂಬ ವಿಚಾರ ಹಠಾತ್ತಾಗಿ ಅವರ ನೆನಪಿಗೆ ಬಂದಿತು. ಒಡನೆಯೆ ಅವರಿಗೆ ಹಸಿವಾದ ಹಾಗಾಯಿತು. ರಾಯರು ಸ್ನಾನಕ್ಕಾಗಿ ಕೆಳಗಡೆ ಹೊರಟರು.

೨

## 'ಪೂರ್ಣ ಖಾಸಗಿ'

### ಮೂರು ವಾರಗಳ ನಂತರದ ವಿಚಾರ

ಮುಂಬಯಿಯ ಸುಪ್ರಸಿದ್ಧ ಮುತ್ತುರತ್ನಗಳ ವ್ಯಾಪಾರಿ ಶೇಠ ನರಜೀವನದಾಸರವರ ಅಂಗಡಿಯೆದುರಿಗೆ ಒಬ್ಬ ಹುಡುಗ ಬಂದು ನಿಂತುಕೊಂಡ. ಅವನ ಕೈಯಲ್ಲೊಂದು ಕವರು ಇತ್ತು. ಅದರ ಮೇಲೆ 'ಪೂರ್ಣ ಖಾಸಗಿ' ಎಂಬ ಸೂಚನೆ ಕೆಂಪು ಶಾಯಿಯಲ್ಲಿ ಬರೆಯಲ್ಪಟ್ಟಿದ್ದಿತು.

ಶೇಠ ನರಜೀವನದಾಸರ ಹೆಸರನ್ನರಿಯದ ವ್ಯಾಪಾರಸ್ಥರಾರೂ ಮುಂಬಯಿಯಲ್ಲಿರುವುದು ಸಾಧ್ಯವಿರಲಿಲ್ಲ. ಮುಂಬಯಿ, ಕಂಬಾಯತ, ಕೊಲಂಬೋ, ಮದ್ರಾಸ ಇತ್ಯಾದಿ ಮುತ್ತುರತ್ನ ವ್ಯಾಪಾರದ ಪ್ರಸಿದ್ಧ ಪಟ್ಟಣಗಳಲ್ಲಿನ ರತ್ನಪಡಿ ಪೇಟೆಯಲ್ಲಿ ನರಜೀವನದಾಸರಿಗೆ ತುಂಬ ಗೌರವವಿತ್ತು. ಆಮಸ್ಟರ್‌ಡಾಮ್, ಪ್ಯಾರಿಸ್, ನ್ಯೂಯಾರ್ಕ್, ಲಂಡನ್ ಇತ್ಯಾದಿ ನಗರಗಳ ರತ್ನಪಡಿ ವ್ಯಾಪಾರಿಗಳೊಂದಿಗೆ ಅವರು ನಿಯಮಿತವಾಗಿ ವ್ಯವಹರಿಸುತ್ತಿದ್ದರು. ಪರದೇಶಗಳ ಕೂಡ ವ್ಯಾಪಾರ, ವ್ಯವಸಾಯಗಳ ಬಗ್ಗೆ ತಿಳಿದುಕೊಳ್ಳುವುದಕ್ಕೆಂದು ಅವರು ಎರಡು ಮೂರು ಸಲ ವಿದೇಶ ಯಾತ್ರೆಯನ್ನೂ ಕೈಕೊಂಡಿದ್ದರು. ಅದರಿಂದಾಗಿ ಪರದೇಶ ವ್ಯಾಪಾರಸ್ಥರಿಗೂ ಸಹ ನರಜೀವನದಾಸರ ವಿಚಾರ ಚೆನ್ನಾಗಿ ಗೊತ್ತಿತ್ತು. ಈ ವ್ಯವಸಾಯದಲ್ಲಿ ಅವರು ಇಷ್ಟು ಪ್ರಸಿದ್ಧರಾಗಿದ್ದರೂ ಸಹ ವರ್ಷದಲ್ಲಿ ಹದಿನೈದು ಇಪ್ಪತ್ತು ವ್ಯಾಪಾರಗಳ ಮೇಲೆ ಅವರು ಮುಂದುವರೆಯುತ್ತಿರಲಿಲ್ಲ. ಆದರೆ ಅಕ್ಕ ಪಕ್ಕದ ಹತ್ತಿಪ್ಪತ್ತು ವ್ಯಾಪಾರಸ್ಥರ ವ್ಯಾಪಾರವನ್ನೆಲ್ಲ ಕೂಡಿಸಿದರೂ ನರಜೀವನದಾ

ಸರ ವ್ಯಾಪಾರಕ್ಕೆ ಅದು ಹೆಚ್ಚಾಗುತ್ತಿರಲಿಲ್ಲ. ಸಣ್ಣ ಪುಟ್ಟ ವ್ಯಾಪಾರಗಳಿಗೆ ಅವರು ಕೈ ಹಾಕುತ್ತಿರಲೇ ಇಲ್ಲ. ಹಿಂದೂ ದೇಶದ ಅನೇಕ ಜನ ಸಂಸ್ಥಾನಿಕರಿಂದ ಅವರಿಗೆ ಸಲಹೆಗಾಗಿ ಆಮಂತ್ರಣಗಳು ಬರುತ್ತಿದ್ದವು. ಕಳೆದ ಎಂಟು ಹತ್ತು ವರ್ಷಗಳಲ್ಲಿನ ಬಹು ಮೌಲ್ಯ ರತ್ನಗಳ ವ್ಯಾಪಾರವೆಲ್ಲ ಶೇಠರ ಮೂಲಕವೇ ನಡೆದಿತ್ತು.

ಮುಂಬಯಿಯಲ್ಲಿನ ಚಿಕ್ಕ ಅಕ್ಕಸಾಲಿಗನೊಬ್ಬನ ಅಂಗಡಿಯಲ್ಲಿಯೂ ಸಹ ಒಡವೆಗಳಿಂದ ತುಂಬಿದ ಶೋ-ಕೇಸುಗಳಿರುವುದುಂಟು. ದೊಡ್ಡ ದೊಡ್ಡ ರತ್ನಪಡಿ ವ್ಯಾಪಾರಸ್ಥರ ಅಂಗಡಿಗಳಲ್ಲಂತೂ ಮುತ್ತು ರತ್ನಗಳ ರಾಶಿಯೇ ಸೂರೆಯಾಗಿರುವದು. ಹೊಳೆ ಹೊಳೆಯುವ ಆ ಶೋ-ಕೇಸ್‌ಗಳೂ, ಮುತ್ತುರತ್ನಗಳ ಒಡವೆಗಳೂ ನೋಡುವವರ ಹೃದಯಗಳನ್ನು ಒಮ್ಮೆಲೆ ಸೆಳೆಯುವವು. ನರಜೀವನದಾಸರ ಅಂಗಡಿಯಲ್ಲಿ ಅಂಥ ಆಡಂಬರವೇನೂ ಇರಲಿಲ್ಲ. ಈ ವ್ಯಾಪಾರಕ್ಕಾರಂಭಿಸುವಾಗ ಅವರು ಮೋತೀ ಬಜಾರದಲ್ಲಿನ ಭದ್ರವಾದ ಮನೆಯೊಂದನ್ನು ಬಾಡಿಗೆ ಹಿಡಿದಿದ್ದರು. ಅಲ್ಲಿಯೇ ಅವರಿಗೆ ವ್ಯಾಪಾರದಲ್ಲಿ ಅಭೂತಪೂರ್ವ ಯಶಸ್ಸು ದೊರೆಯಿತಾದ್ದರಿಂದ ಆ ಮನೆಯನ್ನೆಲ್ಲ ಅವರು ಕೊಂಡುಕೊಂಡಿದ್ದರು. ಮೂರು ಅಂತಸ್ತುಗಳ ಆ ಮನೆ ಭವ್ಯವಾಗಿತ್ತು. ಕೆಳಗಿನ ಭಾಗವನ್ನು ಮಾತ್ರ ತಮ್ಮ ಉಪಯೋಗಕ್ಕಾಗಿ ಇಟ್ಟುಕೊಂಡು ಅವರು ಮಿಕ್ಕ ಎರಡು ಅಂತಸ್ತುಗಳನ್ನು ಹಾಗೇ ಬರಿಯದಾಗಿ ಬಿಟ್ಟಿದ್ದರು. ದೂರ ದೂರದ ಸ್ಥಳಗಳಿಂದ ತಮ್ಮಲ್ಲಿಗೆ ವ್ಯಾಪಾರಕ್ಕಾಗಿ ಬರುವವರಿಗೆ ಆ ಮೇಲಿನ ಅಂತಸ್ತುಗಳಲ್ಲಿ ವಸತಿಯ ವ್ಯವಸ್ಥೆ ಮಾಡಿ ಕೊಡುತ್ತಿದ್ದರು. ಕೆಳಗಿನ ಭಾಗದಲ್ಲಿ ಕೇವಲ ಮೂರು ಕೋಟಡಿಗಳಿದ್ದವು. ಬಾಗಿಲಿಗೆ ಹತ್ತಿಕೊಂಡಿದ್ದ ಕೋಟಡಿಯಲ್ಲಿ ಶೇಟಜಿಯ ವಿಶ್ವಾಸಪಾತ್ರ ಕರಣಿನ ಕುಳಿತುಕೊಳ್ಳುತ್ತಿದ್ದ. ಅಂಗಡಿಯ ಹಾಗೆ ಈ ಕೋಟಡಿ ತೆರೆದಿರುತ್ತಿರಲಿಲ್ಲವಾದ್ದರಿಂದ ಒಳಗಡೆ ಏನು ನಡೆದಿದೆಯೆಂಬುದು ಬೀದಿಯ ಮೇಲೆ ಹೋಗುವ ಜನಗಳಿಗೆ ಗೊತ್ತಾಗುವಂತಿರಲಿಲ್ಲ.

ಶೇಟಜಿಯ ಕರಣಿಕನ ಹೆಸರು ಗೋವರ್ಧನದಾಸ ಎಂದು. ಮುಂಬಯಿಯ ರತ್ನಪಡಿ ಪೇಟೆಯಲ್ಲೆಲ್ಲ ನರಜೀವನದಾಸರಂಥ ರತ್ನ ಪರೀಕ್ಷಕರಿನ್ನಾರೂ ಇರಲಿಲ್ಲವಾದರೆ ಗೋವರ್ಧನದಾಸ ಅವರಿಗೆ ಎರಡನೆಯವ

ನಾಗಿದ್ದ. ಲಾಭಪ್ರದವಾದರೊಂದು ದೊಡ್ಡ ವ್ಯವಹಾರ ಕೈಗೆ ತೆಗೆದುಕೊಳ್ಳು
ವುದಕ್ಕೆ ಮೊದಲು ಶೇಟಜಿ ಗೋವರ್ಧನನ ಸಲಹೆ ಕೇಳದಿರುತ್ತಿರಲಿಲ್ಲ.
ಶೇಟಜಿ ಹಾಗೂ ಗೋವರ್ಧನನ ಪೂರ್ವಜರಿಬ್ಬರೂ ಕಾಠೇವಾಡದಿಂದ
ಮುಂಬಯಿಗೆ ವ್ಯಾಪಾರಕ್ಕೆಂದು ಬಂದವರು. ಅಂದಿನಿಂದಲೂ ಸ್ವಾಮಿ-
ಸೇವಕರ ಭಾವನೆ ಅವರಲ್ಲಿ ಬಳೆದುಬಂದಿತ್ತು. ಇಂದು ಸ್ವತಂತ್ರವಾಗಿ
ವ್ಯಾಪಾರ ಮಾಡುವಷ್ಟು ಬುದ್ಧಿ, ಸಂಪತ್ತು ಹಾಗೂ ಸಾಹಸಗಳು ಗೋವರ್ಧನ
ನಲ್ಲಿದ್ದರೂ ಕೇವಲ ಸ್ವಾಮಿನಿಷ್ಠೆಗಾಗಿ ಆತ ಬೇರೆ ಅಂಗಡಿ ಹಾಕಿರಲಿಲ್ಲ.
ಕರಣಿಕರು ಸ್ವತಃ ಶೇಟಜಿಗಳಾಗಿ ವ್ಯಾಪಾರಕ್ಕಾರಂಭಿಸಿ ತಮ್ಮ ಹಿಂದಿನ
ಒಡೆಯರಿಗೆ ಆಕಸ್ಮಿಕ ಸಂದರ್ಭಗಳಲ್ಲಿ ದೊಡ್ಡ ಪ್ರಮಾಣದಲ್ಲಿ ನೆರವಾದ
ಉದಾಹರಣೆಗಳಿಗೆ ಮುಂಬಯಿಯಲ್ಲಿ ಕೊರತೆಯಿಲ್ಲ. ಆದರೆ ಅವರಂತೆ
ಗೋವರ್ಧನನೂ ಸ್ವಂತ ಅಂಗಡಿ ಏಕೆ ತೆರೆಯುತ್ತಿಲ್ಲವೆಂಬುದು ಶೇಟಜಿಗೆ
ಗೊತ್ತಿದ್ದಿತು. ಅಂತೆಯೆ ಅವರು ಅವನ ಸ್ವಾಮಿನಿಷ್ಠೆಗೆ ಮೆಚ್ಚಿಕೊಂಡು
ಪ್ರತಿಯೊಂದು ವ್ಯವಹಾರದಲ್ಲಿ ಅವನಿಗೆ ಶೇಕಡಾ ಕೆಲವೊಂದು ಭಾಗವನ್ನು
ಲಾಭವಾಗಿ ಕೊಡುತ್ತ ಬಂದಿದ್ದರು.

ನಡುವಿನ ಕೋಟಡಿಯಲ್ಲಿ ಶೇಟಜಿಯವರ ಕಚೇರಿಯಿತ್ತು. ಅಲ್ಲಿನ
ವ್ಯವಹಾರ ಕುರ್ಚಿ-ಮೇಜುಗಳಿಂದೊಡಗೂಡಿದ್ದುದೇ ಕಚೇರಿಯೆಂದು ಕರೆ
ಯಲು ಕಾರಣ. ಅರ್ಥ ವ್ಯವಹಾರ ಹಾಗೂ ಒಣ ಹರಟೆಗಳಿಗೆ ಅಲ್ಲಿ
ಸೌಕರ್ಯವಿರಲಿಲ್ಲವಾದ್ದರಿಂದ ವ್ಯಾಪಾರದ ವಿನಾ ಯಾರೂ ಅಲ್ಲಿಗೆ ಕಾಲಿಡು
ತ್ತಿರಲಿಲ್ಲ. ದೊಡ್ಡದಾದ ವಿಲಾಯತಿಯ ಮೇಜು, ನಾಲ್ಕು ಗಾದಿಯ ಕುರ್ಚಿ
ಗಳು, ಸುಂದರವಾದ ಗಾಜಿನಬೀರು, ಒಂದು ಭದ್ರವಾದ ತಿಜೋರಿ, ಇಷ್ಟೆ
ಅಲ್ಲಿದ್ದ ಸಾಮಾನು. ಅವೆಲ್ಲ ತುಂಬ ಬೆಲೆ ಬಾಳುವ ಸಾಮಾನುಗಳಾದ್ದ
ರಿಂದಲೂ, ಭವ್ಯವಾಗಿ ತೋರುತ್ತಿದ್ದುದರಿಂದಲೂ ಅವುಗಳನ್ನು ನೋಡು
ತ್ತಲೂ ಶೇಟಜಿಯ ಸ್ವಭಾವದ ಕಲ್ಪನೆ ಸಾಹಜಿಕವಾಗಿಯೆ ಬರುವಂತಿತ್ತು.
ಆ ಸಾಮಾನುಗಳೆಲ್ಲವನ್ನು ಅವರು ಪರದೇಶದಿಂದ ಕೊಂಡು ತಂದಿದ್ದರು.
ಪ್ರಸಿದ್ಧ ಕಾರಖಾನೆಯೊಂದರಲ್ಲಿ ತಿಜೋರಿಯನ್ನು ತಮಗಾಗಿಯೆ ತಯಾರಿಸಿ
ಕೊಂಡಿದ್ದರು. ಅದನ್ನೊಡೆಯಲು ಕಳ್ಳರು ದಿನವೆಲ್ಲ ಹೆಣಗಿದರೂ ಸರಿ, ಉರಿ
ಯುವ ಬೆಂಕಿಯಲ್ಲಿ ಅದನ್ನು ಹಾಕಿದರೂ ಸರಿ, ಒಳಗಿನ ವಸ್ತುಗಳಿಗೆ ಯಾವ

ಹಾನಿಯೂ ಆಗುವಂತಿರಲಿಲ್ಲ. ಜರ್ಮನ್ ಯಂತ್ರಜ್ಞರು ಕಂಡುಹಿಡಿದ ಉಪಾಯಗಳನ್ನೆಲ್ಲ ಆ ತಿಜೋರಿಯ ತಯಾರಿಕೆಯಲ್ಲಿ ಉಪಯೋಗಿಸಿಕೊಳ್ಳಲಾಗಿತ್ತು. ಕಪಾಟಿನಲ್ಲಿ ಬೆಳ್ಳಿಯ ಟೀ–ಸೆಟ್ ಹಾಗೂ ಉಚ್ಚತರದ ಗಾಜಿನ ಗ್ಲಾಸುಗಳಿದ್ದವು. ಕಪಾಟಿನ ತೀರಾ ಕೆಳಗಿನ ಅಂಕಣಗಳಿಗೆ ಬೇರೆ ಬಾಗಿಲುಗಳಿದ್ದವು. ಬೇರೆ ಬೇರೆ ಬಣ್ಣಗಳ ಮಲಮಲಿನ ಬಟ್ಟೆಯ ತುಂಡುಗಳು ಅವುಗಳಲ್ಲಿದ್ದವು. ಮೇಜಿಗೆ ಹೊಂದಿಕೊಂಡಿದ್ದ ಒಂದು ಪುಟ್ಟ ಕಪಾಟಿನಲ್ಲಿ ರತ್ನಪಡಿ ವ್ಯಾಪಾರ ವಿಷಯಕವಾದ ಕೆಲವು ಪುಸ್ತಕಗಳು ಅಚ್ಚುಕಟ್ಟಾಗಿ ಇರಿಸಲ್ಪಟ್ಟಿದ್ದವು. ಮೇಜಿನ ಮೇಲೆ ಭಾರಿ ಸಾವರಿನ ವಿದ್ಯುತ್ತಿನ ಲ್ಯಾಂಪ್ ಇರಿಸಲಾಗಿದ್ದಿತು. ಅದರ ಕಿರಣಗಳು ಪರೀಕ್ಷೆ ಮಾಡುವ ರತ್ನದ ಮೇಲೆ ಬೀಳುವ ಹಾಗೆ ಏರ್ಪಾಟೂ ಆಗಿತ್ತು.

ನಂಜೀವನ ಶೇಟಜಿಯವರ ಅಂಗಡಿಯೆದುರಿಗೆ ಒಬ್ಬ ಹುಡುಗ 'ಪೂರ್ಣ ಖಾಸಗಿ' ಕಾಗದವೊಂದನ್ನು ತೆಗೆದುಕೊಂಡು ಬಂದನೆಂದು ಮೇಲೆ ಹೇಳಿದೆ. ಆ ಸಮಯದಲ್ಲಿ ಶೇಟಜಿ ತಮ್ಮ ಖಾಸಗೀ ಕೋಣೆಯಲ್ಲಿ ಕುಳಿತುಕೊಂಡು ಪತ್ರವ್ಯವಹಾರ ನೋಡುವುದರಲ್ಲಿ ತೊಡಗಿದ್ದರು. ಮಧ್ಯಮ ಆಕಾರದ ಅವರ ದೇಹ ಕೊಂಚ ಸ್ಥೂಲವಾಗಿದ್ದಿತಾದರೂ ಮೇಹವೃದ್ಧಿಯಿಂದಾಗಿ ಅವರ ಕಣ್ಣುಗಳಲ್ಲಿನ ಕಳೆ ಮಾತ್ರ ಕೊಂಚವೂ ಕಡಿಮೆಯಾಗಿರಲಿಲ್ಲ. ಸುಸಂಪನ್ನರಾದ ಗುಜರಾತೀ ಜನ ಬೆಲೆ ಬಾಳುವ ಬಟ್ಟೆಗಳನ್ನು ಧರಿಸುವುದುಂಟು. ಆದರೆ ನಮ್ಮ ಶೇಟಜಿಯ ಮೈಮೇಲೆ ಮಾತ್ರ ತೀರ ಸಾದಾ ತರದ ಬಟ್ಟೆಗಳದ್ದವು. ಅವುಗಳಿಂದ ಅವರ ಸಂಪತ್ತಿನ ಇಲ್ಲವೆ ವ್ಯಾಪಾರದ ಕಲ್ಪನೆ ಬರಲು ಸಾಧ್ಯವಿರಲಿಲ್ಲ. ಇರಲಿ

ಗೋವರ್ಧನರಾವ್ ಒಳಗೆ ಬಂದು ಆ ಕವರನ್ನು ಶೇಟಜಿಯ ಕೈಗಿತ್ತ. ಲಕೋಟೆಯನ್ನೊಡೆದು ಒಳಗಿನ ಕಾಗದದ ಮೇಲೆ ದೃಷ್ಟಿ ತೂರುತ್ತ ಶೇಟಜಿ ಕೇಳಿದರು.

'ಗೋವರ್ಧನ, ಈ ಲಕೋಟೆಯನ್ನು ಯಾರು ತಂದು ಕೊಟ್ಟರು ?'

'ಖಾಸಗೀ ಶಿಪಾಯಿಯ ಹಾಗೆ ಕಾಣುತ್ತಾನೆ'

‘ಉತ್ತರಕ್ಕಾಗಿ ಕಾದಿರುವನೇನು ಆತ?’

‘ಹೌದು.’

‘ಸರಿ. ಉತ್ತರ ಸಿದ್ಧವಾಗುತ್ತಲೂ ನಾನು ನಿಮ್ಮನ್ನು ಕರೆಯುತ್ತೇನೆ.’

ಗೋವರ್ಧನ ಕೊಠಡಿಯಿಂದ ಹೊರಟುಹೋದೊಡನೆ ಶೇಟಜಿ ಬಂದು ನೋಟ್‌ಪೇಪರನ್ನೂ ಕವರನ್ನೂ ತೆಗೆದುಕೊಂಡರು. ಇವೆರಡೂ ಉಚ್ಚ ತರದ ಕಾಗದದಿಂದ ತಯಾರಾಗಿದ್ದು ಅವುಗಳ ಮೇಲೆ ಶೇಟಜಿಯ ಹೆಸರು ನೀಲವರ್ಣದಲ್ಲಿ ಎಂಬಾಸ್ ಮಾಡಲಾಗಿದ್ದಿತು. ಉತ್ತರ ಬರೆಯುವದಕ್ಕೆ ಮುಂಚೆ ಮೂಲ ಪತ್ರದಲ್ಲಿನ ವಿಚಾರವನ್ನು ಸರಿಯಾಗಿ ತಿಳಿದುಕೊಳ್ಳಲೆಂದು ಅವರು ಮತ್ತೊಮ್ಮೆ ಅದನ್ನೋದತೊಡಗಿದರು. ಪತ್ರ ವಿದ್ದುದು ಹೀಗೆ :

“ಹೀರಾ ಮಣೇಕ್ ಮ್ಯಾನ್ಸನ್<br>ಪೆಡರ್ ರೋಡ್,<br>ಮುಂಬಯಿ.

ಪ್ರೇಮಪೂರ್ಣ ವಂದನೆಗಳು

ಮಹತ್ವದ ವಿಷಯವೊಂದನ್ನು ಕುರಿತು ತಮ್ಮಿಂದ ಸಲಹೆ ಪಡೆಯುವದಕ್ಕಾಗಿ ರಾಮಪುರದಿಂದ ಬಾಬೂರಾಯರು ನನ್ನನ್ನು ಮುಂಬಯಿಗೆ ಕಳುಹಿಸಿಕೊಟ್ಟಿದ್ದಾರೆ. ವ್ಯವಹಾರದ ಸೌಕರ್ಯಕ್ಕಾಗಿಕಾನೂನುಬದ್ಧ ಪ್ರತಿನಿಧಿತ್ವದ ಕಾಗದವನ್ನೂ ಅವರು ನನಗೆ ಕೊಟ್ಟಿದ್ದಾರೆ. ನಿಮಗೆ ಅನುಕೂಲವಾದ ಸಮಯವನ್ನು ತಿಳಿಸಿದರೆ ಆಗ ಬಂದು ಭೆಟ್ಟಿಯಾಗುತ್ತೇನೆ.

ಮುಂಬಯಿಯಲ್ಲಿ ನಾನು ವಾಸಿಸುವ ಸ್ಥಳದ ವಿಳಾಸವನ್ನು ಮೇಲೆಯೆ ಕೊಟ್ಟಿದೆ. ನಿಮ್ಮ ಉತ್ತರದ ಪತ್ರವನ್ನು ಮೊಹರು ಮಾಡಿ ಆ ವಿಳಾಸಕ್ಕೆ ನಮ್ಮ ಶಿಪಾಯಿಯೊಂದಿಗೆ ಕಳುಹಿಸುವುದು. ಅವನ ಜೊತೆಗೆ ಕಳುಹಿಸಲು ಸಾಧ್ಯವಾಗದಿದ್ದರೆ ರಜಿಸ್ಟರ್ ಮಾಡಿ ಕಳುಹಿಸಬಹುದು. ಈ ವ್ಯವಹಾರವೆಲ್ಲ ಅತ್ಯಂತ ರಹಸ್ಯವಾಗಿ ನಡೆಯಬೇಕೆಂದು ನಮ್ಮ ಮಾಲೀಕರ ಇಚ್ಛೆಯಿದೆ. ಈ ಕೆಲಸ ತಮ್ಮ ಮುಖಾಂತರವಾಗಿಯೆ ನಡೆಯಬೇಕೆಂದು ಅವರು

ಅಪೇಕ್ಷಿಸಿದ್ದಾರೆ. ಅವರ ಈ ಅಪೇಕ್ಷೆಯನ್ನು ತಾವು ಪೂರ್ಣಗೊಳಿಸಿದರೆ ತುಂಬ ಉಪಕಾರವಾದೀತೆಂದು ತಮಗೆ ತಿಳಿಸಲು ನನಗೆ ಅವರು ಅಪ್ಪಣೆ ಮಾಡಿದ್ದಾರೆ.

ನಾನು ನನ್ನ ಸಹಪಾಠಿ ಮಿತ್ರನೊಬ್ಬನ ಜೊತೆಗೆ ಈ ಕೆಲಸಕ್ಕಾಗಿ ಮುಂಬಯಿಗೆ ಬಂದಿದ್ದೇನೆ. ತಾವು ನಿಯಮಿಸಿದ ಸಮಯಕ್ಕೆ ತಮ್ಮನ್ನು ಭೆಟ್ಟಿಯಾಗಲು ಉತ್ಸುಕರಾಗಿದ್ದೇವೆ.

ಈ ಪತ್ರ ಅತ್ಯಂತ ಖಾಸಗೀ ಸ್ವರೂಪದ್ದಾಗಿದೆಯೆಂದು ನನಗೆನ್ನಿಸುವು ದರಿಂದ ಈ ವಿಚಾರವನ್ನು ತೀರ ರಹಸ್ಯವಾಗಿರಿಸಬೇಕೆಂದು ನಾನು ತಮಗೆ ವಿನಂತಿ ಮಾಡಿಕೊಂಡರೆ ತಾವು ಅನ್ಯಥಾ ಭಾವಿಸಲಿಕ್ಕಿಲ್ಲವೆಂದು ನನ್ನ ನಂಬಿಕೆ.

ಇಂತು ತಮ್ಮ ಕೃಪಾಕಾಕ್ಷಿ,
ಪದ್ಮಾಕರ ಪಾಟೀಲ "

ಪತ್ರ ಓದಿ ಮುಗಿಸಿದರೂ ಸಹ ಶೇಟಜಿಯ ದೃಷ್ಟಿ ಅದರ ಮೇಲೆ ಸ್ಥಿರವಾಗಿ ನೆಲಿಸಿತ್ತು. ಅವರು ತಮ್ಮಷ್ಟಕ್ಕೆ ತಾವೇ ಯೋಚಿಸುತ್ತಿದ್ದರು.

'ರಾಮಪುರದ ಬಾಬೂರಾವ್ ! ಒಂದು ಕೆಲಸಕ್ಕಾಗಿ ಅವರು ತಮ್ಮ ವಿಶ್ವಾಸದ ಮನುಷ್ಯರನ್ನು ಇಲ್ಲಿಗೆ ಕಳುಹಿಸಿದ್ದಾರೆ. ಕೆಲಸ ಇಷ್ಟು ಮಹತ್ವದ್ದಾಗಿದ್ದರೆ ಅವರು ಸ್ವತಃ ತಾವೇ ಏಕೆ ಬರಲಿಲ್ಲ ಇಲ್ಲಿಗೆ ? ರಾಮ ಪುರವೇನೂ ಇಲ್ಲಿಂದ ಬಹಳ ದೂರದಲ್ಲಿಲ್ಲ. ಆದರೆ ಯಾರಿಗೆ ಗೊತ್ತು. ಮುದುಕ ಸುಸ್ತಾಗಿದ್ದನು. ಅದು ಹೇಗೇ ಇರಲಿ. ಅವರು ಈ ಕೆಲಸಕ್ಕಾಗಿ ಮನುಷ್ಯರನ್ನು ಕಳುಹಿಸಿರುವರೆಂದ ಮೇಲೆ ಅದು ಮಹತ್ವದ್ದಾಗಿಯೆ ಇರ ಬೇಕು. ಬಹಳ ಮಾಡಿ ಅಸಾಮಿ ಒಂದು ರತ್ನದ ಮೇಲೇ ಕಣ್ಣಿಟ್ಟಿರಬೇಕು. ನನ್ನ ವ್ಯವಹಾರದ ಪದ್ಧತಿಯೂ ಅವರಿಗೆ ಗೊತ್ತಿದೆ. ಅಂತೆಯೆ, ಏನೋ ಭಾರಿ ಕಾರ್ಯವಿದ್ದೀತು ಇದು ! "

ಶೇಟಜಿಯ ಪತ್ರವ್ಯವಹಾರವನ್ನೆಲ್ಲ ಗೋವರ್ಧನ ನೋಡಿಕೊಳ್ಳು ತ್ತಿದ್ದ. ಉತ್ತರ ಬರೆಯುವಾಗ ಶೇಟಜಿ ಕೇವಲ ಅಂಶಗಳನ್ನು ತಿಳಿಸಿ ಅನಂತರ ಗೋವರ್ಧನ ಕಾಗದ ಬರೆದ ಬಳಿಕ ಸಹಿ ಹಾಕುತ್ತಿದ್ದರಷ್ಟೆ. ಆದರೆ ಈ ಪತ್ರದಲ್ಲಿ ರಹಸ್ಯದ ವಿಶೇಷ ವಿನಂತಿಯಿದ್ದುದರಿಂದ, ಅದೂ ಬಾಬೂರಾಯರ ವಿನಂತಿಯಾದುದರಿಂದ ಈಗ ಮಾತ್ರ ಸತಃ ಶೇಟಜಿಯೆ ಉತ್ತರ ಬರೆದರು. ಅಷ್ಟು ಮಾತ್ರವಲ್ಲ, ಆ ಪತ್ರದ ಮೇಲೆ ಒತ್ತಕರಡನ್ನು ಹಾಕಲಿಲ್ಲ. ವಿಳಾಸ ಬರೆದ ಕವರು ಹಾಗೂ, ಕಾಗದಗಳೆರಡನ್ನೂ ತೆರೆ ದಿಟ್ಟು ಮಸಿ ಆರುವ ತನಕ ಕಾಯ್ದಿದ್ದರು. ಅನಂತರ ಕಾಗದವನ್ನು ಮಡಚಿ ಕವರಿನಲ್ಲಿ ಹಾಕಿ ಮೊಹರು ಒತ್ತಿದರು. ಮೇಜಿನ ಕೆಳಗಿನ ಅಂಕಣ ದಲ್ಲಿ ಶೇಟಜಿಯ ಮಹತ್ವದ ಪತ್ರವ್ಯವಹಾರ ಅಕ್ಷರಗಳ ಅನುಕ್ರಮದ ಮೇರೆಗೆ ವ್ಯವಸ್ಥಿತವಾಗಿ ಇರಿಸಲ್ಪಟ್ಟಿದ್ದಿತು. ಇಂಗ್ಲಿಷ್ ಭಾಷೆಯಲ್ಲಿ ಅಕ್ಷರ ಕಡಿಮೆಯಾಗಿರುವುದರಿಂದ ಇಂಗ್ಲಿಷ್ ಸ್ಪೆಲಿಂಗ್ ಮೇರೆಗೆ ಪತ್ರಗಳನ್ನು ಬೇರೆ ಬೇರೆ ಚೀಲಗಳಲ್ಲಿ ಹಾಕಿ ಇಡುವುದು ಸುಲಭವಾದುದು. ಮೇಲೆ ಕಾಣಿ ಸಿದ ಪತ್ರ ಶ್ರೀಮಂತ ಪದ್ಮಾಕರ ಪಾಟೇಲರಿಂದ ಬಂದಿದ್ದರೂ ಅವರು ಶೇಟ ಬಾಬೂರಾಯರ ವತಿಯಿಂದ ಕೆಲಸ ಮಾಡುತ್ತಿದ್ದರಾದ್ದರಿಂದ ಅದನ್ನು 'ಬಿ' ಅಕ್ಷರದ ಚೀಲದಲ್ಲಿಟ್ಟರು ಶೇಟಜಿ.

ಪತ್ರದ ವ್ಯವಸ್ಥೆ ಮಾಡಿದ ನಂತರ ಶೇಟಜಿ ಗೋವರ್ಧನನನ್ನು ಕರೆದು ಉತ್ತರದ ಲಕೋಟೆಯನ್ನಾತನ ಕೈಗಿತ್ತರು. ಶೇಟಜಿಯ ಕೊಟಡಿಯನ್ನು ಬಿಟ್ಟು ಹೊರಗೆ ಬರುತ್ತಲೂ ಗೋವರ್ಧನನ ಮೇಲಿನ ವಿಳಾಸವನ್ನೋದಿ ನೋಡಿದ. ಶೇಟಜಿ ಈ ಪತ್ರವನ್ನು ತನ್ನಿಂದ ಬರೆಯಿಸಲಿಲ್ಲವಲ್ಲ ಎಂದು ಅವರಿಗೆ ವಿಷಾದವಾಗಿದ್ದುದರಿಂದ ಆತ ವಿಳಾಸವನ್ನು ನೋಡಿದನೆಂದಲ್ಲ. ಕೇವಲ ಕುತೂಹಲ ಹಾಗೂ ರೂಢಿಯಿಂದ ಬಂದ ಚಟಗಳೇ ಅವನನ್ನು ಹಾಗೆ ನೋಡಲು ಹಚ್ಚಿದವು. ಪಾಟೇಲ ಎಂಬ ಆಸಾಮಿಯು ಜೊತೆಗೆ ಇದು ವರೆಗೆ ತಮ್ಮ ಅಂಗಡಿಯ ವ್ಯವಹಾರವೇನೂ ನಡೆದಿರಲಿಲ್ಲವಾದ್ದರಿಂದ ಆತ ಶೇಟಜಿಯ ಸ್ನೇಹಿತನಾಗಿರಬಹುದೆಂದು ಗೋವರ್ಧನ ಕಲ್ಪಿಸಿಕೊಂಡ. ಹೊರಗಡೆ ಉತ್ತರಕ್ಕಾಗಿ ಕಾದುನಿಂತಿದ್ದ ಸೇವಕನ ಕೈಗೆ ಆ ಲಕೋಟೆ ಬೀಳು ತ್ತಲೂ ಆತ ಸೈಕಲ್ ಏರಿ ಹೊರಟು ನಡೆದ.

೩

# ಶೇಟಜಿಯ ಭೆಟ್ಟಿ

ಮಾರನೆಯ ದಿನ ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಹಿರೀ ಮಣೇಕ್ ಪ್ಯಾನ್ಸನ್‌ದ ಎದುರಿಗೆ ಟ್ಯಾಕ್ಸಿಯೊಂದು ಬಂದು ನಿಂತು ಕೊಂಡಿತು. ಶ್ರೀಯುತ ಪದ್ಮಾಕರ ಪಾಟೀಲರು ತಮ್ಮ ಸಹಕಾರಿ ಮಿತ್ರ ಜಾಧವರ ಜೊತೆಗೆ ಹೊರಗಡೆ ಬಂದೊಡನೆ ಶಿಪಾಯಿಯೊಬ್ಬ ಮೋಟರಿನ ಬಾಗಲನ್ನು ತೆರೆದ. ಅವರಿಬ್ಬರೂ ಚರ್ಮದ ಸುಂದರ ಕೈಚೀಲಗಳನ್ನು ಹಿಡಿದುಕೊಂಡಿದ್ದರು. ಮೋಟರು ಏರಿ ಅವರು ಕುಳಿತುಕೊಂಡ ಬಳಿಕ ಡ್ರೈವರು ಯಂತ್ರಕ್ಕೆ ಕೀಲಿ ಕೊಟ್ಟ. ಮೋಟರು ಓಡತೊಡಗಿತು. ಎಲ್ಲಿಗೆ ಹೋಗಬೇಕು ಅಲ್ಲಿಗೆ ಯಾವಾಗ ತಲಪಬೇಕು ಎಂಬ ಬಗ್ಗೆ ಮೊದಲೇ ಸೂಚನೆ ಕೊಡಲ್ಪಟ್ಟಿದ್ದರಾದುದರಿಂದ ಡ್ರೈವರು ನೇರವಾಗಿ ನರಜೀವನ ಶೇಟರ ಅಂಗಡಿಯೆದುರಿಗೆ ಮೋಟಾರು ತಂದು ನಿಲ್ಲಿಸಿದ. ಆಗ ಮೂರು ಹೊಡೆದು ಹದಿಮೂರು ನಿಮಿಷಗಳಾಗಿತ್ತು. ಮೂರೂಕಾಲು ಗಂಟೆಗೆ ಭೆಟ್ಟಿಯಾಗಬೇಕೆಂದು ಶೇಟಜಿ ನಿರೂಪ ಕಳುಹಿಸಿದ್ದರಾದುದರಿಂದ ಅವರಿಬ್ಬರೂ ಸರಿಯಾದ ಸಮಯಕ್ಕೆ ಅಲ್ಲಿಗೆ ಆಗಮಿಸಿ ತಮ್ಮ ಬಗ್ಗೆ ಶೇಟಜಿಯ ಮನಸ್ಸಿನಲ್ಲಿ ಅನುಕೂಲ ಗ್ರಹವನ್ನುಂಟು ಮಾಡಿಕೊಡಲಾಶಿಸಿದ್ದರು. ರಾಮಪುರದ ಜನ ಬಂದೊಡನೆ ಅವರನ್ನು ನೆಟ್ಟಗೆ ತಮ್ಮ ಕೊಠಡಿಗೆ ಕಳುಹಿಸಿಕೊಡುವಂತೆ ಶೇಟಜಿ ಮೊದಲೇ ಗೋವರ್ಧನನಿಗೆ ಸೂಚನೆ ಕೊಟ್ಟಿದ್ದರು. ಅಂತೆಯೆ ಬಂದವರ ಹೆಸರಿನ ಕಾರ್ಡುಗಳನ್ನು ಕಂಡೊಡನೆ ಗೋವರ್ಧನ ಅವರನ್ನು ಒಳಗಿನ ಕೋಣೆಗೆ ಕರೆದೊಯ್ದ.

ನರಜೀವನದಾಸ ಅವರ ಸ್ವಾಗತಕ್ಕಾಗಿ ಸಿದ್ಧರಾಗಿದ್ದರು. ವ್ಯಾಪಾರೀ ಮನುಷ್ಯ ಎಂಥ ಕೋಟ್ಯಾಧೀಶನಾಗಿದ್ದರೇನಾಯಿತು, ತನ್ನ ಗಿರಾಕಿಗಳೊಂದಿಗೆ ಅತ್ಯಂತ ಗೌರವದಿಂದ ವರ್ತಿಸುತ್ತಾನೆ. ವ್ಯವಹಾರ ಎಷ್ಟು ಸಾಮಾನ್ಯವಾಗಿದ್ದರೂ ಚಿಂತೆಯಿಲ್ಲ. ಈ ರೀತಿ ವರ್ತಿಸುವ ವ್ಯಾಪಾರಿಯೆ ಯಶಸ್ಸು ದೊರಕಿಸುತ್ತಾನೆ. ನರಜೀವನ ಶೇಟರು ತುಂಬ ಗೌರವ

ದಿಂದಲೂ ಗಾಂಭೀರ್ಯದಿಂದಲೂ ವರ್ತಿಸುತ್ತಿದ್ದರಾದುದರಿಂದ ಅವರೊಂದಿಗೆ ಹುಡುಗಾಟಕ್ಕಿಳಿಯುವ ಸಾಹಸ ಯಾರಿಂದಲೂ ಆಗುತ್ತಿರಲಿಲ್ಲ. ನಮಸ್ಕಾರ ಚಮತ್ಕಾರಗಳು ಕೊನೆಗಂಡ ತರುವಾಯ ಪದ್ಮಾಕರ ತನ್ನ ಬ್ಯಾಗಿನಿಂದ ಕೆಲವು ಕಾಗದಪತ್ರ ತೆಗೆದು ಮೇಜಿನ ಮೇಲಿರಿಸಿದ. ಒಂದು ಕಾಗದವನ್ನು ಆರಿಸಿ ತೆಗೆದು ಅದನ್ನು ಶೇಟಜಿಯ ಕೈಗೆ ಕೊಟ್ಟು 'ಈ ಕರಾರಿನ ಮೇರೆಗೆ ರಾಮಪುರದ ಬಾಬೂರಾಯರ ಪ್ರತಿನಿಧಿತ್ವ ನನಗೆ ದೊರೆತಿದೆ. ತಾವು ಕೊಂಚ ಅದರ ಮೇಲೆ ದೃಷ್ಟಿಯೋಡಿಸಬೇಕು' ಎಂದ.

ಕರಾರುಪತ್ರದಲ್ಲಿನ ಅಂಶಗಳನ್ನೂ, ಬಾಬೂರಾಯರ ಸಹಿಯನ್ನೂ ದಿಟ್ಟಿಸಿ ನೋಡಿದ ನಂತರ ಶೇಟಜಿ ಆ ಕಾಗದವನ್ನು ಕೆಳಗಿರಿಸಿದರು. ಅನಂತರ ಪದ್ಮಾಕರ ಇನ್ನೊಂದು ಲಕೋಟೆಯನ್ನು ತೆರೆದು ಅದರೊಳಗಿನ ಬೇರೆ ಬೇರೆ ಬ್ಯಾಂಕುಗಳ ಬೇರೆ ಬೇರೆ ಬಣ್ಣಗಳ ಚೆಕ್ಕುಗಳನ್ನು ಹೊರ ದೆಗೆದು ಶೇಟಜಿಯವರಿಗೆ ಕೊಟ್ಟ. ಅವುಗಳ ಮೇಲೆ ಕೊಂಚಕಾಲ ದೃಷ್ಟಿ ಓಡಿಸಿದಾಗ ಬೇರೆ ಬೇರೆ ಬ್ಯಾಂಕಗಳ ಮೇಲಿನ ಈ ಹುಂಡಿಗಳ ಒಟ್ಟು ಮೊತ್ತ ಸುಮಾರು ಒಂದು ಕೋಟಿ ರೂಪಾಯಿಗಳಷ್ಟಾಗಬಹುದೆಂಬುದು ಶೇಟಜಿಗೆ ಅರಿವಾಯಿತು. ಚೆಕ್ಕುಗಳ ಮೇಲಿನ ಸಹಿಗಳನ್ನು ಅವರು ನಿರೀ ಕ್ಷಿಸಿ ನೋಡಿದರು. ಅವುಗಳ ಬಗ್ಗೆ ಸಂಶಯಪಟ್ಟುಕೊಳ್ಳಬೇಕಾದುದೇನೂ ಇರಲಿಲ್ಲ. ಸಣ್ಣಪುಟ್ಟ ವ್ಯವಹಾರಗಳನ್ನು ಕೈಗೆ ತೆಗೆದುಕೊಳ್ಳಬಾರ ದೆಂದೇನೊ ಅವರು ನಿರ್ಧರಿಸಿದ್ದು ನಿಜ. ಆದರೆ ಭಾರಿ ರಕಮಿನ ವ್ಯವಹಾರ ಗಳಿಗೂ ಒಂದು ಮಿತಿಯೆನ್ನುವುದಿರುವುದಲ್ಲ. ಬಾಬೂರಾಯರು ಕಳುಹಿಸಿದ ಈ ಚೆಕ್ಕುಗಳನ್ನು ಕಂಡು ಸ್ವತಃ ನರಜೀವನಶೇಟರೂ ದಂಗಾಗಿ ಹೋದರು. 'ಜ್ಯುವೆಲರ್ಸ್ ಜನರಲ್'ದಲ್ಲಿನ ರಾಜಮನೆತನದ ಮುತ್ತುರತ್ನಗಳ ಜಾಹಿ ರಾತನ್ನು ಅವರೂ ನೋಡಿದ್ದರು. ಅವುಗಳಲ್ಲಿ ಕೆಲವು ವಸ್ತುಗಳ ಖರೀದಿ ಗಾಗಿಯೆ ಇವರನ್ನು ಬಾಬೂರಾಯರು ಕಳುಹಿಸಿರಬಹುದೆಂದು ಶೇಟಜಿ ತರ್ಕಿ ಸಿದ್ದರು. ಪುರಾತನ ಮತ್ತು ಬಹುಮೂಲ್ಯ ರತ್ನಗಳ ಹವ್ಯಾಸ ಬಾಬೂ ರಾಯರಿಗೆ ವಿಪರೀತವಾಗಿದ್ದುದರಿಂದ ಅವರ ಮನಸ್ಸಿಗೆ ಬಂದ ಸಾಮಾನು ಸಂಪಾದಿಸಲು ಅವರೆಂದೂ ಹಿಂದೆಮುಂದೆ ನೋಡಲಾರರೆಂಬ ವಿಚಾರ ಮುಂಬಯಿಯ ವ್ಯಾಪಾರಸ್ಥರಿಗೆಲ್ಲ ಚೆನ್ನಾಗಿ ಗೊತ್ತಿದ್ದಿತು. ಅಷ್ಟು ಮಾತ್ರ

ವಲ್ಲ, ಒಂದೊಂದುಸಲ ಬಾಬೂರಾಯರ ಬೇಡಿಕೆಯಿಂದಾಗಿಯೆ ಒಂದೊಂದು ರತ್ನಕ್ಕೆ ಬೆಲೆ ಏರುತ್ತಿದ್ದುದೂ ಉಂಟು. ತಾವು ಸ್ವತಃ ಮುಂಬಯಿಗೆ ಹೋಗದಿದ್ದರೆ ಸುಲಭದರದಲ್ಲಿ ಮಾಲು ಸಿಕ್ಕಬಹುದೆಂಬ ವಿಚಾರದಿಂದಲೇ ಬಾಬೂರಾಯರು ಈ ಪ್ರತಿನಿಧಿಗಳನ್ನು ಕಳುಹಿಸಿರಬೇಕೆಂದು ನಂಜೀವನ ಶೇಟರಿಗೆನ್ನಿಸಿತು.

ಚೆಕ್ಕುಗಳನ್ನು ಪುನಃ ಲಕೋಟೆಗೆ ಹಾಕಿ ಪದ್ಮಾಕರ ಕಾಗದಪತ್ರಗಳ ಇನ್ನೊಂದು ಕಟ್ಟನ್ನು ಶೇಟಜಿಯೆದುರಿಗಿರಿಸಿದ.

'ಈಗ ನಾನು ಮುಂಬಯಿಗೆ ಯಾವ ಕೆಲಸದಲ್ಲಿ ತಮ್ಮ ಸಲಹೆ ತೆಗೆದುಕೊಳ್ಳಲು ಬಂದಿರುವೆನೊ ಅದರ ಸಂಪೂರ್ಣ ಮಾಹಿತಿ ಈ ಕಾಗದಗಳಲ್ಲಿ ತಮಗೆ ದೊರೆಯುವುದು' ಎಂದು ಹೇಳಿದ.

ಶೇಟಜಿ ಆ ಕಾಗದಗಳನ್ನು ನಿರೀಕ್ಷಿಸುವುದಕ್ಕೆ ಮೊದಲು ಉಚ್ಚ ತರಗತಿಯ ಸಿಗರೇಟುಗಳನ್ನು ತೆಗೆದು ಬಂದವರಿಗೆ ಕೊಟ್ಟು, ತಾವೂ ಹೊತ್ತಿಸಿದರು. ಧೂಮ್ರಪಾನದಿಂದಾಗಿ ಅತಿ ಕಠಿನವಾದ ವಿಷಯಗಳೂ ನೂಲಿನೆಳೆಯ ಹಾಗೆ ಸುಲಭವಾಗಿ ಬಿಡಿಸಲ್ಪಡುತ್ತವೆಂದು ಹೇಳುತ್ತಾರೆ. ಈ ಸಂದರ್ಭದಲ್ಲಂತೂ ಹಾಗಾದುದು ನಿಜ. ನಾಲ್ಕಾರು ಬಾರಿ ಹೊಗೆ ಎಳೆದ ತರುವಾಯ ಪದ್ಮಾಕರ ಬಿಚ್ಚುಮನಸ್ಸಿನಿಂದ ಮಾತನಾಡತೊಡಗಿದ.

'ಉತ್ತರ ಹಿಂದುಸ್ಥಾನದ ಆ ಸಂಸ್ಥಾನದ ರಾಜ ಮನೆತನದ ಮುತ್ತು ರತ್ನದೊಡವೆಗಳ ಮಾರಾಟದ ಜಾಹಿರಾತು ತಮ್ಮ ದೃಷ್ಟಿಗೆ ಬಿದ್ದಿದ್ದೀತು?

'ಹೌದು. ಆ ಒಡವೆಗಳ ಯಾದಿಯೂ ಸಹ ನನ್ನ ಕಡೆ ಬಂದಿದೆ.'

'ಈ ಸಾಮಾನು ಯಾರ ಮುಖಾಂತರ ಮಾರಾಟಕ್ಕೆ ಬಂದಿಹುದೆಂಬುದು ತಮಗೆ ಗೊತ್ತಿದ್ದೀತು?'

'ಇಲ್ಲ. ಇದುವರೆಗೂ ಈ ಬಗ್ಗೆ ನನಗೆ ಖಾತ್ರಿಯಾದಂಥ ಸುದ್ದಿ ತಿಳಿದು ಬಂದಿಲ್ಲ.'

' ಚಿಂತೆಯಿಲ್ಲ. ಆ ಸುದ್ದಿಗಾಗಿ ಕಾಯುತ್ತ ಕೂತಿರುವ ಅಗತ್ಯವೇನೂ ಇಲ್ಲ. ಏಕೆಂದರೆ ನಮ್ಮ ಮಾಲೀಕರು ಆ ಸುದ್ದಿಯನ್ನು ಈ ಮೊದಲೇ ತಿಳಿದುಕೊಂಡಿದ್ದಾರೆ. ನಾನು ರಾಮಪುರದಿಂದ ತಂದ ಈ ಸುದ್ದಿ ಈಗಲೂ ತಮಗೆ ಹೊಸದಾಗಿರುವುದು ಮಾತ್ರ ಸ್ವಲ್ಪ ಆಶ್ಚರ್ಯದ ವಿಚಾರವೇ ಸರಿ' ಎಂದು ಪದ್ಮಾಕರ ಕೊಂಚ ಹಂಗಿಸುವ ದನಿಯಲ್ಲಿ ಹೇಳಿದ— 'ಮುಂಬಯಿಯ ಹಿರಾಸಿಂಗ ಸಾಲಿಸಿಟರ್ ತಮ್ಮ ಪರಿಚಯಸ್ಥರಾಗಿರಬಹುದು.'

' ಹೌದು. ವ್ಯವಹಾರದಲ್ಲಿ ಯಾವುದೊಂದು ಸಮಸ್ಯ ಉದ್ಭವಿಸಿದಾಗ ನಾನು ಅವರ ಸಲಹೆ ಪಡೆಯುವುದುಂಟು. ಅವರದೇನು ಸಂಬಂಧ ಈ ವಿಚಾರದಲ್ಲಿ ? '

'ಆ ಸಂಸ್ಥಾನಿಕರಿಗೂ ಸಹ ಹಿರಾಸಿಂಗರೇ ಸಲಹೆಗಾರರಾಗಿದ್ದಾರೆ. ಅಂತೆಯೆ ಈ ಮಾಲು ಅವರ ಮುಖಾಂತರಗಾಗಿಯೆ ಮಾರಾಟಕ್ಕೆ ಬರಲಿದೆ.'

'ಬಹಳ ಸಂತೋಷದ ವಿಚಾರ. ಇಂಥ ಸತ್ಯವಂತನನ್ನು ಮಹಾರಾಜರು ಆರಿಸಿದುದನ್ನು ನೋಡಿದರೆ ಅವರು ಮನುಷ್ಯರನ್ನು ಚೆನ್ನಾಗಿ ಪರೀಕ್ಷಿಸಬಲ್ಲರೆಂಬುದು ತಿಳಿದುಬರುತ್ತೆ.'

' ಇಂದು ಬೆಳಗಿನ ಮೇಲಿನಿಂದ ಎಲ್ಲ ಮಾಲೂ ಬಂದು ಹಿರಾಸಿಂಗರ ತಿಜೋರಿಯಲ್ಲಿ ಭದ್ರವಾಗಿರಿಸಲ್ಪಟ್ಟಿದೆಯೆಂದು ನನಗೆ ನಂಬಲರ್ಹವಾದ ಕಡೆಯಿಂದ ವರ್ತಮಾನ ಬಂದಿದೆ. ಪೇಟೆಯಲ್ಲಿ ಯಾರಿಗೂ ಈ ಸುದ್ದಿ ತಿಳಿದಿಲ್ಲವಾದ್ದರಿಂದಲೂ, ಅವರಿಗೂ ನಿಮಗೂ ಯಾವಾಗಲೂ ವ್ಯವಹಾರವಿರುವುದರಿಂದಲೂ ಈ ವ್ಯಾಪಾರ ಸುಗಳೀತವಾಗಿ ಜರಗಬಹುದೆಂದು ನನಗೆ ಆಸೆಯಿದೆ.' ಎಂದು ಹೇಳಿ ಮಧ್ಯದಲ್ಲಿ ಕೊಂಚ ಕೆಮ್ಮಿ ಪುನಃ ಹೇಳತೊಡಗಿದ— 'ಸಂಸ್ಥಾನದಿಂದ ಮುಂಬಯಿಗೆ ಬಂದ ಒಡವೆಗಳ ಪಟ್ಟಿಯನ್ನು ಓದಿರಬೇಕು. ಎಲ್ಲ ವಸ್ತುಗಳಲ್ಲಿ ರತ್ನಗೋಲವೇ ಅತ್ಯಂತ ಪುರಾತನವೂ ಬಹುಮೂಲ್ಯವೂ ಆದುದಾಗಿದೆಯೆಂಬುದು ಸ್ಪಷ್ಟವಿದೆ. ನಮ್ಮ ಪೂರ್ವಜರೆಷ್ಟು ಸುಧಾರಿಸಿದ್ದರು, ಎಂಥ ವೈಭವಶಾಲಿಗಳಾಗಿದ್ದರು, ಅವರ ಕಲಾ

ಕೌಶಲ್ಯ ಎಷ್ಟು ಉಚ್ಚ ದರ್ಜೆಯದಾಗಿತ್ತು ಎಂಬುದಕ್ಕೆ ಪ್ರತ್ಯಕ್ಷ ನಿದರ್ಶನ ಈ ರತ್ನ ಗೋಲ. ಅದನ್ನು ಕೊಂಡು ತರಲೆಂದೇ ಬಾಬುರಾಯರು ಕಳುಹಿ ಸಿದ್ದಾರೆ.'

'ಈ ರತ್ನಗೋಲವನ್ನು ಜಾಹಿರಾತಿನಲ್ಲಂತೂ ವಿಪರೀತ ವರ್ಣಿಸಿ ದ್ದಾರೆ. ಆದರೆ ಅದನ್ನು ಪ್ರತ್ಯಕ್ಷವಾಗಿ ನೋಡದೆ ಬೆಲೆಯನ್ನು ಕುರಿತು ಮಾತನಾಡುವುದು ಬಹಳ ಸಾಹಸದ ಕೆಲಸವಾದೀತೆಂದು ನನ್ನ ಅಭಿಪ್ರಾಯ' ಎಂದರು ಶೇಟಜಿ.

'ತಮ್ಮ ಸಲಹೆ ಎಷ್ಟು ಅಮೂಲ್ಯವಾದುದೆಂಬುದನ್ನು ನಾ ಬಲ್ಲೆ. ಸಾಧ್ಯವಾದಷ್ಟೂ ಹುಷಾರಾಗಿ ಹಾಗೂ ತಮ್ಮ ಒಪ್ಪಿಗೆಯೊಂದಿಗೆ ವ್ಯವಹಾರ ನಡೆಸಬೇಕೆಂದು ನಮ್ಮ ಮಾಲೀಕರು ಆಜ್ಞೆ ಮಾಡಿದಾರೆ. ಆದರೂ ಜಾಹೀ ರಾತಿನಲ್ಲಿ ಬಂದ ರತ್ನಗೋಲದ ಸೂಚನೆ ಅಪೂರ್ಣವಾದುದೆಂಬುದು ಮಾತ್ರ ನಿಜ.'

'ಆದರೆ ಪ್ರಸಿದ್ಧವಾಗಿರುವ ವರ್ಣನೆಗಿಂತ ಹೆಚ್ಚು ವಿವರಗಳು ಇದು ವರೆಗೂ ಉಪಲಬ್ಧವಾಗಿಯೆ ಇಲ್ಲ.' ಎಂದರು ಶೇಟಜಿ ಕೊಂಚ ಬೇಸರ ದನಿಯಲ್ಲಿ.

'ರತ್ನಗೋಲದ ಬಗ್ಗೆ ಹೆಚ್ಚಿನ ವಿವರಗಳೂ ಉಪಲಬ್ಧವಾಗಿವೆ. ಅವು ಗಳನ್ನೇ ತಮಗೀಗ ತಿಳಿಸಬೇಕೆಂದು ನನ್ನ ವಿಚಾರ. ರತ್ನಗೋಲ ಪೂರ್ಣ ವಾಗಿ ಚಿನ್ನದಿಂದ ತಯಾರಾಗಿದ್ದು ರತ್ನಖಚಿತವಾಗಿದೆಯೆಂಬುದು ತಮಗೆ ಗೊತ್ತೇ ಇದೆ. ಅದರ ಮೇಲೆ ತತ್ಕಾಲೀನ ಜನಕ್ಕೆ ತಿಳಿದಿದ್ದ ಜಗತ್ತಿನ ನಕಾಶೆಯನ್ನು ರತ್ನಗಳ ಕುಂದಣದಿಂದ ತೋರಿಸಲಾಗಿದೆ. ಇಂದು ಧ್ರುವ ಪ್ರದೇಶಗಳು ಯಾವ ಸ್ಥಳದಲ್ಲಿವೆಯೆ ಆ ಸ್ಥಳದಲ್ಲಿ ಆಗ ಇರಲಿಲ್ಲವೆಂದು ಶಾಸ್ತ್ರಜ್ಞರ ಅಭಿಪ್ರಾಯವುಂಟು. ರತ್ನಗೋಲದ ಮೇಲಿನ ಧ್ರುವಸ್ಥಾನಗಳು ಇಂದಿನ ಸ್ಥಳಗಳಿಗೆ ಬೇರೆಯಾಗಿವೆ. ಅಷ್ಟು ಮಾತ್ರವಲ್ಲ, ಕಾಲಪ್ರವಾಹದಲ್ಲಿ ಇಲ್ಲವೆ ಭೂಕಂಪದ ಗಲಾಟೆಯಲ್ಲಿ ನೀರಿನಲ್ಲಿ ಮುಳುಗಿಹೋದ ಖಂಡಗಳು ಸಹ ಈ ರತ್ನಗೋಲದ ಮೇಲೆ ಸ್ಪಷ್ಟವಾಗಿ ಚಿತ್ರಿತವಾಗಿವೆ. ಪುರಾಣಗಳಲ್ಲಿ

ವರ್ಣಿಸಲ್ಪಟ್ಟ ಖಂಡಗಳ ಸೀಮೆ ರತ್ನಗೋಲದ ಮೇಲಿನ ಸೀಮೆಗಳಿಗೆ ಹೋಲುವುದೆಂದು ಬಾಬೂರಾಯರ ಅಭಿಪ್ರಾಯ.

" ಉತ್ತರ ಹಾಗೂ ದಕ್ಷಿಣ ಧ್ರುವಗಳ ಸ್ಥಳಗಳಲ್ಲಿ ದೊಡ್ಡ ದೊಡ್ಡ ಇಂದ್ರನೀಲಗಳನ್ನು ಕೂಡಿಸಲಾಗಿದ್ದು, ಆ ಕಾಲದಲ್ಲಿ ಸಮುದ್ರವಾಗಿದ್ದ ಪ್ರದೇಶವನ್ನೆಲ್ಲ ನೀಲಮಣಿಗಳಿಂದ ತುಂಬಲಾಗಿದೆ. ಹಿಮಾಲಯ ಪರ್ವತದ ಸ್ಥಳದಲ್ಲಿ ದೊಡ್ಡದೊಂದು ಮಾಣಿಕ್ಯವಿದೆ. ತಿಬೆಟ್ಟಿನ ಹಸಿರು ಪ್ರದೇಶದಲ್ಲಿ ಪಚ್ಚೆಗಳನ್ನು ಕೂಡಿಸಿದ್ದಾರೆ. ಲಂಕಾ ಮತ್ತು ಶಾಮ: ರೂಪಗಳು ಈಗಿನ ನಂತೆಯೆ ಆಗಲೂ ಸಹ ಮಾಣಿಕ್ಯಗಳಿಗಾಗಿ ಪ್ರಸಿದ್ಧಿ ಪಡೆದಿದ್ದವು. ಆ ದೇಶ ಗಳ ಆಕಾರದ ದೊಡ್ಡ ದೊಡ್ಡ ಮಾಣಿಕಗಳನ್ನು ರತ್ನಗೋಲಕ್ಕೆ ಕೂಡಿಸಿದು ಸಿಲೋನದ ದಂಡೆಯಮೇಲಿನ ಒಂದು ತುದಿಗೆ ದೊಡ್ಡದಾದ ತೇಜಸ್ವಿ ಮುತ್ತೊಂದನ್ನು ಕೂಡಿಸಲಾಗಿದೆ. ಪೃಥ್ವಿಯ ಮೇಲಿನ ದೊಡ್ಡ ದೊಡ್ಡ ಪರ್ವತಗಳನ್ನು ನೀಲಮಣಿಗಳಿಂದಲೂ, ನದಿಗಳನ್ನು ಮುತ್ತುಗಳ ಸರಗಳಿಂ ದಲೂ ತೋರಿಸಲಾಗಿದೆ.

" ರತ್ನಗಳ ತೇಜಸ್ಸು, ಆಕಾರ ಹಾಗೂ ನಿರ್ದುಷ್ಟತನಗಳಿಂದಲೇ ಅವು ಗಳ ಬೆಲೆಯೆಷ್ಟೆಂಬುದನ್ನು ನಿರ್ಧರಿಸಲು ಸಾಧ್ಯ. ಆದರೆ ಇದು ಅತಿ ಪುರಾ ತನ ವಸ್ತುವಾದ್ದರಿಂದ ಅಮೌಲ್ಯವಾದುದೆಂದು ಬಾಬೂರಾಯರ ಅಭಿಮತ. ಲಂಕೆಯಿರುವ ಕೆಳಗಿನ ಸ್ಥಳದಲ್ಲಿ ಈ ರತ್ನಗೋಲನ್ನು ತಯಾರಿಸಿದಾತ ಇಲ್ಲವೆ ತಯಾರಿಸಲು ಕಾರಣನಾದವ ತನ್ನ ಹೆಸರನ್ನೊ ಮುದ್ರೆಯನ್ನೊ ನವರತ್ನಗಳಿಂದ ಕೆತ್ತಿದ್ದಾನೆ. ಅದರಿಂದಾಗಿ ಅತಿ ಮಹತ್ವದ ಐತಿಹಾಸಿಕ ಶೋಧವಾಗುವ ಸಂಭವವುಂಟು. "

ಶೇಟಜಿ ಆಶ್ಚರ್ಯದಿಂದ ಉದ್ಗಾರ ತೆಗೆದರು. " ವಾಹವ್ವಾ ! ಅತ್ಯಂತ ಮಹತ್ವದ್ದೆಂದು ಕಾಣುತ್ತೆ ಈ ರತ್ನಗೋಲ ! ಆದರೆ ನಿಮ್ಮ ರಾಯರು ಇಷ್ಟೆಲ್ಲ ವಿವರಗಳನ್ನು ಎಲ್ಲಿಂದ ದೊರಕಿಸಿದರು ? "

" ಅವರು ತೀರ ಪ್ರಾಚೀನಕಾಲದ ಹಸ್ತಲಿಖಿತ ತಾಡೆವೋಲೆಗಳನ್ನು ಸಂಗ್ರಹಿಸಿದ್ದಾರೆ. ಅವುಗಳನ್ನಭ್ಯಸಿಸುವುದರಲ್ಲೇ ಅವರ ಸಮಯದ ಬಹು

ಭಾಗ ವಿನಿಯೋಗವಾಗುತ್ತೆ. ಅಂಥ ಹಸ್ತಲಿಖಿತ ತಾಡವೋಲೆಯೊಂದರಲ್ಲಿ ಅವರಿಗೆ ವಿವರಗಳು ದೊರೆಯಬಹುದೆಂದು ನನ್ನ ತರ್ಕ. ”

‘‘ಆದರೆ ಹಿರಾಸಿಂಗ ಸಾಲಿಸಿಟರ ಹೆಸರು ? ಅದಂತೂ ಆಧುನಿಕ ಕಾಲದ್ದು ಅಲ್ಲವೆ ?’’

‘ ಈ ವಿಚಾರ ತಿಳಿದುಕೊಳ್ಳಬೇಕಾದರೆ ನಮ್ಮ ರಾಯರಿಗೆ ಬಹಳ ಕಷ್ಟವಾಯಿತು. ಆದರೆ ಸಾಲಿಸಿಟರ ಹೆಸರು ಅವರಿಗೆ ಹೇಗೆ ತಿಳಿಯಿತೆಂಬುದು ಮಾತ್ರ ನನಗಿನ್ನೂ ಗೊತ್ತಾಗಲಿಲ್ಲ. ’

ಸರಿ. ಈ ಪ್ರಕರಣದಲ್ಲಿ ನಾನೇನನ್ನು ಮಾಡಬೇಕೆನ್ನುತ್ತಾರೆ ಬಾಬೂ ರಾಯರು ? ’

‘ ರತ್ನಗೋಲದ ಬೆಲೆ ಸುಮಾರು ಒಂದು ಕೋಟಿ ರೂಪಾಯಿಗಳ ವರೆಗಿದೆಯೆಂದು ಪ್ರಕಟಿಸಲಾಗಿದೆ. ಇಷ್ಟೊಂದು ಹಣವನ್ನು ಬಡ್ಡಿ ಬರದ ಮಾಲಿನಲ್ಲಿ ತೊಡಗಿಸುವಂಥ ಲಕ್ಷ್ಮೀಪುತ್ರರು ಪ್ರಪಂಚದಲ್ಲಿ ಬಹಳ ವಿರಳವಷ್ಟೆ. ಮಹಾರಾಜರ ಈ ಒಡವೆಗಳ ಬಗ್ಗೆ ಲಂಡನ್, ಪ್ಯಾರಿಸ್ ಹಾಗೂ ನ್ಯೂಯಾರ್ಕ ನಗರಗಳಲ್ಲಿ ಜಾಹೀರಾತು ಕೊಟ್ಟಿರುವರಾದ್ದರಿಂದ ಈ ರತ್ನಗೋಲ ವಿದೇಶಕ್ಕೆ ಹೋಗಬಹುದಾದ ಸಂಭವವೂ ಇದೆ. ಸಾಧ್ಯವಿರುವ ಮಟ್ಟಿಗೂ ಹೀಗಾಗಗೊಡಬಾರದೆಂದು ಮಹಾರಾಜರ ವೃದ್ಧ ಮಾತೆಯ ಅಪೇಕ್ಷೆಯಿದೆ. ಇನ್ನೂ ಒಂದು ವಿಚಾರ. ಈ ರತ್ನಗೋಲದ ಖರೀದಿಗಾಗಿಯೆ ಬಂಗಾಲದಲ್ಲಿಯ ದೊಡ್ಡ ಜಮೀನ್ದಾರರೊಬ್ಬರ ಪ್ರತಿನಿಧಿ ಮುಂಬಯಿಗೆ ಬಂದಿದ್ದು ಎಷ್ಟೇ ಬೆಲೆ ಕೊಡಬೇಕಾದರೂ ಕೊಟ್ಟು ಅದನ್ನು ದೊರಕಿಸಲು ನಿರ್ಧರಿಸಿದ್ದಾರೆಂದು ನಮ್ಮ ರಾಯರಿಗೆ ಸುದ್ದಿ ಬಂದಿದೆ. ಆದ್ದರಿಂದ ಸಾಧ್ಯವಾದಷ್ಟು ಬೇಗ ಖಾಸಗೀರೀತಿಯಿಂದ ಆ ರತ್ನಗೋಲವನ್ನು ಪರೀಕ್ಷಿಸಿ ವ್ಯಾಪಾರವನ್ನು ಕುದುರಿಸಬೇಕೆಂದು ಬಾಬೂರಾಯರು ತಿಳಿಸಿದ್ದಾರೆ. ಆದ್ದರಿಂದ ತಾವು ದಯ ಮಾಡಿ ಈ ಬಗ್ಗೆ ಸಾಲಿಸಿಟರಿಗೆ ಒಂದು ಮಾತು ಕೇಳಿ ನೋಡಬೇಕು. ’

'ಮಾತನ್ನೇನೋ ಕೇಳಬಹುದು ಆದರೆ ನನ್ನ ಮಾತು ವ್ಯರ್ಥ ಹೋಗಬಾರದು ಅಂತ ನನ್ನಾಸೆ.'

'ಪ್ರಯತ್ನ ಮಾಡುವುದು ತಮ್ಮ ಕೈಯಲ್ಲಿದೆ. ಅಲ್ಲದೆ, ಈ ಕಾರ್ಯ ದಲ್ಲಿ ತಮಗೆ ಯಶ ದೊರೆತಲ್ಲಿ ರತ್ನಗೋಲದ ಬೆಲೆಯಲ್ಲಿ ಶೇಕಡಾ ಐದ ರಷ್ಟು ತಮಗೆ ದಲ್ಲಾಲಿ ಕೊಡಲು ನಮ್ಮ ರಾಯರು ಸಿದ್ಧರಿದ್ದಾರೆ' ಎಂದು ಹೇಳಿ ಪದ್ಮಾಕರ ತನ್ನ ಮಾತಿನಿಂದ ಶೇಟಜಿಯ ಮೇಲೆ ಎಂಥ ಪರಿಣಾಮ ವಾಯಿತೆಂಬುದನ್ನು ಕಂಡುಕೊಳ್ಳಲು ಅವರ ಮುಖವನ್ನು ದಿಟ್ಟಿಸಿ ನೋಡಿದ.

ಒಂದು ಕೋಟಿ ರೂಪಾಯಿಯ ವ್ಯವಹಾರಕ್ಕೆ ಶೇಕಡಾ ಐದರಂತೆ ದಲ್ಲಾಲಿಯೆಂದರೆ ಅದೇನೂ ಸಣ್ಣ ವಿಚಾರವಲ್ಲ. ಒಂದೇಟಿಗೆ ಐದು ಲಕ್ಷ ರೂಪಾಯಿ ಸಂಪಾದಿಸುವ ಸಂದರ್ಭ ದೊಡ್ಡ ದೊಡ್ಡ ವ್ಯಾಪಾರಿಗಳಿಗೂ ಕ್ವಚಿತ್ತಾಗಿಯೆ ಬರುತ್ತದೆ. ಅಲ್ಲದೆ ಈ ವ್ಯಾಪಾರ ಸುರಳೀತವಾಗಿ ಮುಗಿದಲ್ಲಿ ಹಿರಾಸಿಂಗ ಸಾಲಿಸಿಟರೂ ಸಹ ನನಗೆ ಹೂವಿಲ್ಲದಿದ್ದರೂ ಹೂವಿನ ಪಕಳೆ ಯೆಂದು ಕೊಂಚವಾದರೂ ಕಮಿಶನ್ ಕೊಡದಿರಲಾರರು, ಇತ್ಯಾದಿ ವಿಚಾರ ಗಳು ಶೇಟಜಿಯ ಮನಸ್ಸಿನಲ್ಲಿ ಮೂಡುತ್ತಿದ್ದುದು ಅವರ ಮುಖದ ಮೇಲೆ ಗೋಚರವಾಗುವಂತಿತ್ತು. ತಮ್ಮ ಕೆಲಸ ಸಾಧಿಸಿದಂತಾಯಿತೆಂದು ಎನ್ನಿಸಿ ದಾಗ ಬಂದವರಿಬ್ಬರಿಗೂ ಹರ್ಷವಾಗದಿರಲಿಲ್ಲ.

'ಆಗಲಿ. ನಾನು ಪ್ರಯತ್ನ ಮಾಡಿ ನೋಡುವೆ. ಆದರೆ ಕೆಲಸ ಖಂಡಿತ ವಾಗಿಯೂ ಆಗುವದೆಂಬ ಭರವಸೆ ಮಾತ್ರ ಕೊಡಲಾರೆ.'

'ಅದು ಸರಿಯೆ. ನಿಜವಾದ ಪರಿಸ್ಥಿತಿಯನ್ನೆಲ್ಲ ಅವರಿಗೆ ತಿಳಿಸಿ ಹೇಳಿರಿ; ಬಂಗಾಲಿ ಜಮೀನ್ದಾರರಲ್ಲದೆ ಮದ್ರಾಸೀ ಕೋಟ್ಯಾಧೀಶರೊಬ್ಬ ರೊಂದಿಗೆ ಸ್ಪರ್ಧಿಸಬೇಕಾದ ಸಂದರ್ಭ ಬಂದೀತೆಂದು ಬಾಬೂರಾಯರ ಊಹೆ. ಜಾಹೀರಾತಿನಲ್ಲಿ ಉಲ್ಲೇಖಿಸಲ್ಪಟ್ಟ ಬೆಲೆಯನ್ನು ಕೊಡಲು ನಾವು ಸಿದ್ಧರಾಗಿದ್ದೇವೆ. ರತ್ನಗೋಲ ನಮಗೆ ಸಿಕ್ಕಲೇಬೇಕು ಎಂದು ರಾಯರ ಆಗ್ರಹ. ಇದಕ್ಕೆ ಅಗತ್ಯವಿರುವ ಎಲ್ಲ ಹಣವನ್ನು ನಾವು ಜೊತೆಗೆ ತಂದಿ

ದ್ದೇವೆ. ಇಷ್ಟೊಂದು ಹಣವನ್ನು ಇಂಥ ರತ್ನದಲ್ಲಿ ತೊಡಗಿಸುವುದು ರಾಯರಿಗೇನೂ ಕಷ್ಟದ ಕೆಲಸವಲ್ಲ ಎಂಬುದಂತೂ ತಮಗೆ ತಿಳಿದೇ ಇದೆ.'

'ತಿಳಿಯದೇನು? ಅವರ ಅವಾಢವ್ಯ ಸಂಪತ್ತಿನ ಬಗ್ಗೆ ನನಗೂ ಅಲ್ಪ ಸ್ವಲ್ಪ ಗೊತ್ತಿದೆ. ಅದಿರಲಿ. ಈಗ ನಾನೇನು ಮಾಡಬೇಕು ಅಂತೀರಿ ನೀವು?'

'ತಾವು ಖಾಸಗಿರೀತಿಯಿಂದ ರತ್ನಗೋಲದ ಸತ್ಯತೆ ಅಥವಾ ಕೃತ್ರಿಮ ತೆಗಳ ಪರೀಕ್ಷೆ ಮಾಡಬೇಕೆಂಬುದೇ ನಮ್ಮ ವಿನಂತಿ. ತಮ್ಮಂಥ ನುರಿತ ರತ್ನಪರೀಕ್ಷಕರು ಮುಂಬಯಿನಗರದಲ್ಲಿ ಬೇರಾರೂ ಇಲ್ಲವೆಂಬುದನ್ನು ನಾವು ಬಲ್ಲೆವು. ರತ್ನಗೋಲದಮೇಲೆ ಕೂಡಿಸಿದ ಎಲ್ಲ ರತ್ನಗಳೂ ನಿಜವಾದ ರತ್ನಗಳಾಗಿದ್ದಲ್ಲಿ ಮಾತ್ರವೇ ಅದಕ್ಕೆ ಐತಿಹಾಸಿಕ ಮಹತ್ವವುಂಟೆಂಬುದು ಸತ್ಯವೇ ಇದೆ. ಹಿರಾಸಿಂಗರಿಗೆ ತಾವು ವಿನಂತಿಮಾಡಿಕೊಂಡರೆ ಅವರು ಖಂಡಿತವಾಗಿಯೂ ರತ್ನಗೋಲವನ್ನು ತಮ್ಮ ಕಡೆಗೆ ಕಳುಹಿಸುವರು. ನೀವೂ ನಾವೂ ಸೇರಿ ಒಂದು ಸಲ ಅದನ್ನು ಚೆನ್ನಾಗಿ ನೋಡಿ ತಕ್ಷಣವೇ ವ್ಯಾಪಾರ ಹೊಂದಿಸಿಬಿಟ್ಟರಾಯಿತು.'

'ಆದರೆ ಇಷ್ಟೊಂದು ಬೆಲೆಬಾಳುವ ರತ್ನಗೋಲದ ಜವಾಬ್ದಾರಿಯನ್ನು ನನ್ನ ಮೇಲೆ ಹೊರಿಸುವುದು ಅವರಿಗೂ ಅಸಮರ್ಪಕವೆನ್ನಿಸಬಹುದು.'

'ಒಟ್ಟಿಗೆ ಅವರನ್ನು ಇಲ್ಲಿಗೇ ಕರೆಯಿಸಿಬಿಟ್ಟರಾಯಿತು ನಮಗೇನೂ ಹಾಗೆ ಪರೀಕ್ಷೆಮಾಡಿ ಗೊತ್ತಿಲ್ಲ. ಆದರೂ ಒಮ್ಮೆ ನೋಡಿದರೆ ಸಾಕು. ಖಾಸಗೀ ಪರೀಕ್ಷೆಯ ಕಾಲಕ್ಕೆ ನಾವಿಬ್ಬರು ಮತ್ತು ನೀವಿಬ್ಬರು ಮಾತ್ರ ಇರುವುದೆನ್ನುವ ವಿಚಾರವನ್ನು ಅವರಿಗೆ ತಿಳಿಸಿರಿ. ಅವರು ಖಚಿತವಾಗಿ ಒಪ್ಪಿಕೊಂಡಾರು.'

'ಅವರು ಒಪ್ಪಿಕೊಂಡರೆಂದಿಟ್ಟುಕೊಳ್ಳೋಣ ಅದನ್ನು ನಿಮಗೆ ಹೇಗೆ ತಿಳಿಸುವುದು? ಈ ಪ್ರಕರಣ ಅತ್ಯಂತ ಗುಪ್ತವಾಗಿರಬೇಕೆಂದು ನಿಮ್ಮ ಅಪೇಕ್ಷೆಯಿದೆ. ಅವರೂ ಹಾಗೇ ಅಪೇಕ್ಷಿಸಬಹುದೇನೋ.'

' ಅವರನ್ನು ಕರೆದುಕೊಂಡು ನೀವು ಇಲ್ಲಿಗೇ ಬನ್ನಿ. ಜೊತೆಗೆ ರತ್ನ ಗೋಲವನ್ನೂ ತನ್ನಿ. ರಾತ್ರಿ ಒಂಬತ್ತು ಗಂಟೆಗೆ ನೋಡುವ ಸಮಯ ನಿರ್ಧರಿಸಿದರೆ ಎಲ್ಲರಿಗೂ ಅನುಕೂಲ. ಅವರು ಒಪ್ಪಿಕೊಂಡೊಡನೆಯೇ ನನಗೆ ಫೋನ್ ಮಾಡಿ ಬಿಡಿ. ಹಿರಾಮಣಿಕ ಮ್ಯಾನ್ಯನ್‌ರಾಯರ ಒಡೆತನದ್ದೇ. ಅದು ನಂಬರು ಯಾದಿಯಲ್ಲಿ ಸಹಜವಾಗಿ ಸಿಕ್ಕುವುದು. '

' ಆಗಲಿ, ನಾನು ಪ್ರಯತ್ನಿಸುತ್ತೇನೆ ನೀವು ಮಾತ್ರ ಮನೆಯಲ್ಲೇ ಇರಿ. '

ಶೇಟಜಿಯ ಹೇಳಿಕೆಗೆ ಹೂ ಎಂದು ಇಬ್ಬರೂ ಹೊರಬಿದ್ದರು. ಮೋಟಾರಿನಲ್ಲಿ ಕುಳಿತುಕೊಂಡು ತಮ್ಮ ವಸತಿಸ್ಥಾನದ ಕಡೆಗೆ ತೆರಳಿದರು. ಇತ್ತ ನರ ಜೀವನದಾಸರೂ ತಮ್ಮ ಮೋಟಾರಿನಲ್ಲಿ ಕುಳಿತು ಸಾಲಿಸಿಟರ ಸಾಹೇಬರ ಆಫೀಸಿಗೆ ತೆರಳಿದರು.

೪

# ಎಂಟು ನಿಮಿಷಗಳು

ಒಂದು ಕೋಟಿ ರೂಪಾಯಿಯ ವ್ಯಾಪಾರ ಮಾಡುವುದಕ್ಕಾಗಿ ಬಾಬೂರಾಯರು ತನ್ನನ್ನು ಮುಂಬಯಿಗೆ ಕಳುಹಿಸಿಕೊಟ್ಟ ಬಗ್ಗೆ ಪದ್ಮಾಕರನಿಗೆ ಅತೀವ ಸಂತೋಷವಿತ್ತು. ಅಂತೆಯೆ ಆತ ಅತ್ಯುತ್ಸಾಹದಿಂದ ಕೆಲಸ ಮಾಡುತ್ತಿದ್ದ. ಈ ಪ್ರಕರಣದಲ್ಲಿ ಬುದ್ಧಿ ಉಪಯೋಗಿಸಬೇಕಾದ ಅಗತ್ಯವೂ ಇರಲಿಲ್ಲ. ನರ ಜೀವನದಾಸರೆದುರಿಗೆ ಈ ವಿಚಾರವನ್ನು ಯಾವ ರೀತಿ ಇಡಬೇಕು, ರತ್ನ ಗೋಲವನ್ನು ಯಾವ ಸಮಯದಲ್ಲಿ ತೆಗೆದುಕೊಂಡು ಬರಲು ಹಿರಾಸಿಂಗರಿಗೆ ತಿಳಿಸಬೇಕು ಮುಂದೆ ಏನು ಮಾಡಬೇಕು ಎಂಬುದನ್ನೆಲ್ಲ ಬಾಬೂರಾಯರೇ ವಿವರವಾಗಿ ಹೇಳಿಕೊಟ್ಟಿದ್ದರು. ಆದರೂ ಸ್ವಂತ ಬುದ್ಧಿಯನ್ನು ಉಪಯೋಗಿಸಿ ತಾವು ಈ ಕಾರ್ಯವನ್ನು ಮುಗಿಸಿದಲ್ಲಿ ಬಾಬೂರಾಯರಿಂದ ಏನಾದರೂ ಬಹುಮಾನ ದೊರೆಯಬಹುದೆಂದು ಪದ್ಮಾಕರನಿಗೆ ಆಸೆಯಿತ್ತು. ಆತ ಸುಶಿಕ್ಷಿತನೂ ಬುದ್ಧಿವಂತನೂ, ವಿಶ್ವಾಸಿಕನೂ ಆಗಿದ್ದ. ಆದರೆ ಬಾಬೂರಾಯ

ರನ್ನು ವಿಾರಿಸುವ ಬುದ್ಧಿವಂತಿಕೆ ಮಾತ್ರ ಅವನಿಗಿರಲಿಲ್ಲ. ಅಷ್ಟು ಮಾತ್ರವಲ್ಲ ಆತನಲ್ಲಿಲ್ಲದ ಗುಣದೋಷಗಳನ್ನೆಲ್ಲ ಬಾಬೂರಾಯರಲ್ಲಿದ್ದವು. ಕೋಟ್ಯಾಧೀಶ್ವರನಾದ ಬಾಬೂರಾಯ ಎಂಥ ಚಾಣಕ್ಯನಾಗಿದ್ದನೆಂಬುದೂ ಪದ್ಮಾಕರನಿಗೆ ಗೊತ್ತಿರಲಿಲ್ಲ.

ಆನುವಂಶಿಕ ಶ್ರೀಮಂತಿಕೆಯು ಜೊತೆಯಿರದಿದ್ದರೆ ಬಾಬೂರಾಯರ ಹಿಂದೆ ಸದಾಸರ್ವದಾ ಪೋಲೀಸ್‌ಪಡೆ ತಿರುಗುತ್ತಿದ್ದಿತೋ ಏನೋ. ತಮ್ಮ ಶ್ರೀಮಂತಿಕೆಯನ್ನು ವೃದ್ಧಿಗೊಳಿಸಲು ಅವರು ನಡಸಿದ ದುಷ್ಕೃತ್ಯಗಳು ಬೈಲಿಗೆ ಬಂದಿದ್ದರೆ ಯಾವಾಗಲೂ ಕೊಲೆ, ಸುಲಿಗೆ, ದರೋಡೆಗಳಲ್ಲಿ ಮಗ್ನರಾಗಿರುತ್ತಿದ್ದ ದುಷ್ಟರೂ ಸಹ ದಿಗಿಲುಗೊಳ್ಳಬಹುದಾಗಿತ್ತು. ಬಾಬೂರಾಯರ ಈ ಗುಣಗಳ ಕಲ್ಪನೆ ಪದ್ಮಾಕರನಿಗಿರಲಿಲ್ಲವಾದ್ದರಿಂದ ತಾನು ಚಾತುರ್ಯದಿಂದ ಕೆಲಸ ಮಾಡಿದಲ್ಲಿ ಉತ್ತರೋತ್ತರವಾಗಿ ತನ್ನ ಉತ್ಕರ್ಷವಾದೀತೆಂದು ಆತ ತಿಳಿದುಕೊಂಡಿದ್ದ. ತಾನೆಷ್ಟು ವಿಶ್ವಾಸಿಕನೂ ಪ್ರಾಮಾಣಿಕನೂ ಆಗಿದ್ದರೂ ತನ್ನ ಜೊತೆಗೆ ಈ ಜಾಧವನನ್ನು ಏತಕ್ಕಾಗಿ ಕಳುಹಿಸಿದರೆಂಬುದು ಅವನಿಗಿನ್ನೂ ಗೊತ್ತಾಗಿರಲಿಲ್ಲ. ನಂಜೀವನಶೇಟಜಿಯ ಹತ್ತಿರ ಹೋಗುವಾಗ ತನ್ನ ಜೊತೆಗೆ ಜಾಧವನನ್ನು ಕರೆದೊಯ್ಯಬೇಕೆಂದು ಬಾಬೂರಾಯರು ಅವನಿಗೆ ಕಟ್ಟಾಜ್ಞೆ ವಿಧಿಸಿದ್ದರು. ತನ್ನ ಹಿಂದೆ ಬಂದ ಈ ಬಾಲವನ್ನು ಕಂಡು ಅವನಿಗೆ ಬೇಸರವೂ ಬಂದಿತ್ತು. ಆದರೆ ಆ ಬಾಲವನ್ನು ದೂರಗೊಳಿಸುವುದು ಅಸಾಧ್ಯವಾಗಿದ್ದಿತಾದುದರಿಂದ ಆತ ಸುಮ್ಮನಿರಬೇಕಾಗಿತ್ತು.

ಶೇಟಜಿಯು ಅಂಗಡಿಯಿಂದ ಮರಳಿ ಬಂದಬಳಿಕ ಅವರಿಬ್ಬರೂ ಫೋನಿನ ದಾರಿ ಕಾಯುತ್ತ ಕುಳಿತರು. ಗಂಟೆಯಾದರೂ ಫೋನಿನ ಗಂಟೆಯಾಗಲಿಲ್ಲ. ಅವರಿಬ್ಬರೂ ಅಸ್ವಸ್ಥಚಿತ್ತದಿಂದ ಕೊಟಡಿಯಲ್ಲಿ ರತಪಥ ಹಾಕುತ್ತಿದ್ದರು ಮಧ್ಯೆಮಧ್ಯೆ ಸಿಗರೇಟು ಸೇದಿ ಬಿಸುಟುತ್ತಿದ್ದರು. ಕೊನೆಗೆ ನಾಲ್ಕು ಗಂಟೆಯ ಹೊತ್ತಿಗೆ ಗಂಟೆ ಬಾರಿಸತೊಡಗಿತು ರಾತ್ರಿ ಒಂಬತ್ತು ಗಂಟೆಗೆ ಹಿಂಮಸಿಂಗ ಸಾಲಿಸಿಟರು ರತ್ನಗೋಲನ್ನು ತೆಗೆದುಕೊಂಡು ತಮ್ಮ ಅಂಗಡಿಗೆ ಬರುವರೆಂಬ ಶೇಟಜಿಯು ಮಾತು ಕೇಳಿ ಅವರಿಗೆ ಅತ್ಯಾನಂದವಾಯಿತು.

ರಾತ್ರಿ ಗೊತ್ತುಮಾಡಿದ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಹೋಗಲು

ಸಾಧ್ಯವಾಗಬೇಕೆಂದು ಅಂದು ಬಹಳ ಹೊತ್ತು ತಿರುಗಾಡಬಾರದಾಗಿ ಇಬ್ಬರೂ ನಿರ್ಧರಿಸಿದರು. ಅನಂತರ ಇಬ್ಬರೂ ಬೇರೆ ಬೇರೆ ದಾರಿ ಹಿಡಿದು ಹೊರಗಡೆ ತಿರುಗಾಡಲು ಹೋದರು. ಕೆಲಸಕ್ಕೆ ಹೊರಟಾಗ ಇಬ್ಬರೂ ಕೂಡಿಯೇ ಹೋಗುತ್ತಿದ್ದರೂ ತಿರುಗಾಡಲು ಹೊರಟಾಗ ಮಾತ್ರ ಜಾಧವ ಪದ್ಮಾಕರನನ್ನು ತಪ್ಪಿಸುತ್ತಿದ್ದ.

ಆ ದಿನ ಸಾಯಂಕಾಲ ಜಾಧವ ಮನೆಗೆ ಬರಬೇಕಾದರೆ ಬಹಳ ಹೊತ್ತಾಯಿತು ರಾತ್ರಿ ತಾನು ಊಟಮಾಡುವದಿಲ್ಲವಾಗಿ ಆತ ಮೊದಲೇ ಆಚಾರಿಗೆ ಹೇಳಿಹೋಗಿದ್ದ. ಬರುವಾಗ ತಾನು ಮೋಟಾರು ತೆಗೆದುಕೊಂಡು ಬರುವುದಾಗಿಯೂ ಅನಂತರ ಪದ್ಮಾಕರನೂ ತಾನೂ ಸೇರಿ ಅಂಗಡಿಯ ಕಡೆ ಹೊರಡುವುದಾಗಿಯೂ ತಿಳಿಸಿ ಹೋಗಿದ್ದ. ಪದ್ಮಾಕರ ಮನೆಗೆ ಮರಳಿದಾಗ ಅವನಿಗೆ ಈ ವಿಚಾರಗಳು ತಿಳಿದುಬಂದವು. ಒಂಬತ್ತು ಹೊಡೆಯಲು ಹದಿನೈದು ನಿಮಿಷವಿದ್ದಾಗ ಜಾಧವ ಮನೆಗೆ ಬಂದ. ಅಷ್ಟರೊಳಗಾಗಿ ಊಟ ತೀರಿಸಿಕೊಂಡು ಬಟ್ಟೆಹಾಕಿಕೊಂಡು ಪದ್ಮಾಕರ ಜಾಧವನ ದಾರಿಯನ್ನೆ ಎದುರು ನೋಡುತ್ತಿದ್ದ. ಜಾಧವ ಬಂದೊಡನೆ ಆತನಿಗೆ ಕೆಲವು ಗುಪ್ತ ಮಾತುಗಳನ್ನು ಹೇಳಿದ. ಅವುಗಳಿಂದಾಗಿ ಪದ್ಮಾಕರನ ಮನಸ್ಸಿನಲ್ಲಿ ವಿಲಕ್ಷಣ ಕೋಲಾಹಲವೆದ್ದಿತು. ಬಾಬುರಾಯರು ಜಾಧವನನ್ನು ತನ್ನ ಜೊತೆಗೆ ಕಳುಹಿಸಲು ಕಾರಣವೇನು, ನಿತ್ಯವೂ ಸಾಯಂಕಾಲ ಆತ ಒಬ್ಬನೇ ಎಲ್ಲಿಗೆ ಹೋಗುತ್ತಿದ್ದ– ಎಂಬುದೆಲ್ಲ ಪದ್ಮಾಕರನಿಗಾಗ ಗೊತ್ತಾಯಿತು. ಆದರೆ ಈಗ ಗೊತ್ತಾಗಿ ಉಪಯೋಗವೂ ಇರಲಿಲ್ಲ. ಬಾಬೂರಾಯರ ಹತ್ತಿರ ಕೆಲಸಕ್ಕೆ ನಿಂತಾಗಿನಿಂದ ಪದ್ಮಾಕರ ಅವರ ಕೈಗೆ ಸಿಕ್ಕಿಬಿದ್ದಿದ್ದ. ಅವರು ಕೊಟ್ಟ ಆಜ್ಞೆಗಳನ್ನು ಮಾನ್ಯ ಮಾಡದೆ ಬೇರೆ ಗತಿಯಿರಲಿಲ್ಲ. ಒಂದು ವೇಳೆ ಅವರ ಆಜ್ಞೆ ಮೀರಿ ಆತ ವರ್ತಿಸಿದ್ದರೆ ಏನಾದರೂ ನೆಪ ತೆಗೆದು ಅವನ ಮಾನಹಾನಿ ಮಾಡಿ ಜಗತ್ತಿನಲ್ಲಿ ಅವನಿಗೆ ನಿಲ್ಲಲು ಸ್ಥಳ ಕೂಡ ದೊರೆಯದಂತೆ ಮಾಡಲೂ ಅವರು ಹೇಸುತ್ತಿರಲಿಲ್ಲ. ಸಾಯುವ ವರೆಗೂ ಪದ್ಮಾಕರ ಬಾಬೂರಾಯರ ಗುಲಾಮಗಿರಿಯಲ್ಲಿರುವ ಪ್ರಸಂಗ ಬಂದಿತ್ತು. ಇಂದಿನ ಸಂದರ್ಭವೂ ಅಂಥದೇ. ಈಗ ತಾನೇನಾದರೂ ಹಿಂದೇಟು ಹಾಕಿದರೆ ಬಾಬುರಾಯರು ತನ್ನ ಸರ್ವನಾಶಕ್ಕೂ ಪ್ರವೃತ್ತರಾಗಬಹುದೆಂಬ ಭೀತಿ ಅವನಿಗಿತ್ತು. ಅಪರಾಧ

ಕ್ಕಾಗಿ ಅವರು ನಿಯಮಿಸಿದ ವ್ಯಕ್ತಿಗಳೊಂದಿಗೆ ತನಗೆ ಪರಿಚಯವಿಲ್ಲವೆಂದು ನಟಿಸಿ, ಬಾಬೂರಾಯರ ಪ್ರಾಮಾಣಿಕತನದ ಬಗ್ಗೆ ಜಗತ್ತಿಗೆ, ವಿಶೇಷವಾಗಿ ಪೋಲೀಸರಿಗೆ ಮನವರಿಕೆ ಮಾಡಿಕೊಡುವುದಷ್ಟೆ ಅವನ ಕೆಲಸವಾಗಿತ್ತು. ಕೋಟಿ ರೂಪಾಯಿಗಳ ಚೆಕ್ಕುಗಳನ್ನು ತನ್ನ ಜೊತೆಗೆ ಕಳುಹಿಸಿ ತಮ್ಮ ಶ್ರೀಮಂತಿಕೆ ಹಾಗೂ ಸತ್ಯಸಂಧತೆಗಳ ಬಗ್ಗೆ ಪ್ರಚಾರವಾಗುವಂತೆ ಮಾಡು ವುದು ಮಾತ್ರ ಬಾಬೂರಾಯರ ಉದ್ದೇಶವಾಗಿದ್ದಿತೆಂಬುದು ತಿಳಿದುಬಂದಾಗ ಪದ್ಮಾಕರ ಕಟ್ಟಿದ ಗಾಳಿಗೋಪುರಗಳೆಲ್ಲ ಧಡಧಡನೆ ಉರುಳಿಬಿದ್ದವು. ಆದರೆ ತನ್ನ ಆಸೆಗಳೆಲ್ಲ ವ್ಯರ್ಥವಾದುದಕ್ಕಾಗಿ ಶೋಕಿಸುತ್ತ ಕುಳಿತಿರುವ ಸಮಯವೂ ಅದಾಗಿರಲಿಲ್ಲ. ಪ್ರಾರಂಭಿಸಿದ ನಾಟಕವನ್ನು ಹಾಗೇ ಮುಂದುವರೆಯಿಸಿ ಆತ ಒಡನೆಯೆ ಶೇಟಜಿಯ ಅಂಗಡಿಯ ಕಡೆಗೆ ಹೊರಡಬೇಕಾಗಿದ್ದಿತು. ಸರಿಯಾಗಿ ಒಂಬತ್ತು ಗಂಟೆಗೆ ಅವರಿಬ್ಬರೂ ಅಲ್ಲಿಂದ ಹೊರಟರು.

\+ \+ \+ \+

ಒಂಬತ್ತು ಹೊಡೆದು ಎರಡು ನಿಮಿಷಗಳಾಗಿದ್ದಿತು.

ಮೋತೀಬಜಾರದಲ್ಲಿನ ನರಜೀವನದಾಸರ ಅಂಗಡಿಯೆದುರಿಗೆ ಒಂದು ಮೋಟಾರು ಬಂದು ನಿಂತುಕೊಂಡಿತು. ಕೊಂಚ ಹೊತ್ತಿಗೆ ಮೊದಲು ಸ್ವತಃ ಶೇಟಜಿಯನ್ನೂ ಹಿರಾಸಿಂಗ ಸಾಲಿಸಿಟರನ್ನು ಹೊತ್ತುತಂದ ರೋಲ್ಸ್‌ರಾಯ್ಸ್ ಮೋಟಾರು ಕೊಂಚ ದೂರದಲ್ಲಿ ನಿಂತುಕೊಂಡಿದ್ದಿತು.

ಆಗ ಬೀದಿಯಲ್ಲಿ ಯಾರ ಸುಳಿವೂ ಇರಲಿಲ್ಲ. ಚಳಿಗಾಲದ ದಿನಗಳಾದ್ದ ರಿಂದ ರಾತ್ರಿ ಬಹು ಬೇಗ ಆಗುತ್ತಿದ್ದುದರಿಂದ ಪೇಟೆ ಬೇಗ ಮುಚ್ಚುತ್ತಿತ್ತು. ಅರ್ಥಾತ್, ರಾತ್ರಿ ಒಂಬತ್ತು ಗಂಟೆಯ ಆ ಸಮಯದಲ್ಲಿ ಮಧ್ಯೆ ಮಧ್ಯೆ ಗಸ್ತು ತಿರುಗುವ ಪೋಲೀಸರನ್ನುಳಿದು ಅಲ್ಲಿ ಬೇರಾರೂ ಇರಲಿಲ್ಲ. ಆಗ ತಾನೆ ಬಂದ ಮೋಟಾರಿನಿಂದ ಇಬ್ಬರು ವ್ಯಕ್ತಿಗಳು ಇಳಿಯುವುದನ್ನು ಕಂಡು ಗಸ್ತಿನ ಶಿಪಾಯಿ ಕೊಂಚ ತಡೆದು ನಿಂತ. ಆದರೆ ಇಳಿದ ವ್ಯಕ್ತಿಗಳು ಸಭ್ಯರಂತೆ ಬಟ್ಟೆಬರೆ ಮಾಡಿಕೊಂಡಿದ್ದುದರಿಂದ ಆತ ಆ ಕಡೆಗೆ ಹೆಚ್ಚು ಗಮನ ಕೊಡದೆ. ಬೇರೆ ದಾರಿಗೆ ತಿರುಗಿದ.

ಫುಟ್‌ಪಾತ್ ಮೇಲೆ ನಿಂತುಕೊಂಡಿದ್ದ ಇಬ್ಬರು ವ್ಯಕ್ತಿಗಳು ಬೇರಾರೂ ಆಗಿರದೆ 'ತ್ರಿಮೂರ್ತಿ'ಗಳಲ್ಲಿ ಇಬ್ಬರಾಗಿದ್ದರು. ಮೂರನೆಯ ಮೂರ್ತಿ ಡ್ರೈವರನ ಸ್ಥಾನದಲ್ಲಿ ಕುಳಿತುಕೊಂಡಿದ್ದಿತು. ಆ ಮೂವರು ಬಾಬೂರಾಯರ ಅಪ್ಪಣೆಯ ಮೇರೆಗೆ ಈ ಕೆಲಸಕ್ಕೆ ತೊಡಗಿದ್ದರು.

'ಧನುಜಿ, ಎದುರಿಗಿನ ಮೋಟಾರು ಆ ಹಿರಾಸಿಂಗನದೆಂದು ಕಾಣುತ್ತೆ' ಎಂದ ಸಂತಾಜಿ. ಧನಾಜಿ ರೋಲ್ಸ್ ರಾಯ್ಸ್ ಮೋಟಾರಿನ ನಂಬರನ್ನು ನೋಡಿ ಮರಳಿ ಬಂದು ತಮ್ಮ ಮೋಟಾರಿನಲ್ಲಿ ಕುಳಿತಿದ್ದ ಪಿತಾಜಿಯ ಕಿವಿಯಲ್ಲಿ ಏನನ್ನೊ ನುಡಿದ

'ಅದರ ಚಿಂತೆ ಬೇಡ. ನೀವು ಕೆಲಸಕ್ಕೆ ತೊಡಗಿರಿ' ಎಂಬ ಪಿತಾಜಿಯ ಆಶ್ವಾಸನಪರ ಶಬ್ದಗಳನ್ನು ಕೇಳಿ ಅವರಿಬ್ಬರೂ ಮುಂದುವರೆದರು. ಅಂಗಡಿಯೊಳಗೆ ಕಾಲಿಡುವಾಗ ಎದುರಿಗಿನ ಮೋಟಾರಿನ ಡ್ರೈವರನ ಮುಂದೆಯೆ ಅವರು ಹಾಯ್ದು ಹೋಗಬೇಕಾಗಿದ್ದಿತು. ಅಂಗಡಿಯ ಕಟ್ಟೆಯನ್ನೇರುವಾಗ ಆ ಡ್ರೈವರನ ಕಣ್ಣು ತಪ್ಪಿಸುವ ಪ್ರಯತ್ನವನ್ನೇನೂ ಅವರು ಮಾಡಲಿಲ್ಲ. ಆತನ ಕಣ್ಣು ಕೊನೆಯ ಬಾರಿಗೆ ಮುಚ್ಚಿ ಹೋಗುವ ಕಾಲ ಸಮಿಾಪಿಸಿದೆಯೆಂಬುದು ಅವರಿಗೆ ಗೊತ್ತಿತ್ತು.

ಅಂಗಡಿಯ ಹೊರಗಿನ ಕೊಠಡಿಯಲ್ಲಿ ಒಂದೇ ಒಂದು ದೀಪ ಉರಿಯುತ್ತಿತ್ತು. ಗೋವರ್ಧನನೂ ಅಲ್ಲಿರಲಿಲ್ಲ. ಒಳಗಿನ ಬಾಗಿಲಿನ ಹ್ಯಾಂಡಲ್ ತಿರುಗಿಸಿ ಬಾಗಿಲು ತೆರೆಯಲು ಪ್ರಯತ್ನಿಸಿದ ಧನಾಜಿ. ಅದು ಯಶಸ್ವಿಯಾಗಲಿಲ್ಲ. ಬಾಗಿಲಿನ ಮೇಲೆ ಬೆರಳಿನಿಂದ ತಟ್ಟಿದ. ಒಡನೆಯೆ ಒಳಗಡೆ ಯಾರೋ ಬರುವ ಸದ್ದು ಕೇಳಿಸಿತು. ಬಾಗಿಲಿನ ಮೇಲಿದ್ದ ಗಾಜಿನೊಳಗಿನಿಂದ ಮನುಷ್ಯಾಕೃತಿ ಗೋಚರವಾಯಿತು. ಸ್ವಲ್ಪ ಹೊತ್ತಿನಲ್ಲಿ ಬಾಗಿಲೂ ತೆರೆಯಿತು. ಧನಾಜಿ ಮುಂದೆ ಅಡಿಯಿಟ್ಟ ಅವನ ಹಿಂದಿನಿಂದ ಸಂತಾಜಿಯೂ ಒಳಸೇರಿ ಬಾಗಿಲನ್ನು ಮುಚ್ಚಿಕೊಂಡ.

ರಾತ್ರಿಕಾಲದಲ್ಲಿ ಹೊರಗಿನ ಕೋಣೆಯಲ್ಲಿ ವಿಶೇಷ ಕೆಲಸಗಳೇನೂ ನಡೆಯುತ್ತಿರಲಿಲ್ಲವಾದ್ದರಿಂದ ಅಲ್ಲಿ ಒಂದೇ ಒಂದು ದೀಪವಿಡುವ ಪದ್ಧತಿ

ಯಿತ್ತು. ಗೋವರ್ಧನ ಕುಳಿತುಕೊಳ್ಳುವ ಪೆಟ್ಟಿಗೆಯ ಮೇಲೆ ಆ ದೀಪವಿತ್ತು. ಬಾಗಿಲಿನಿಂದ ಅದು ತುಂಬ ದೂರ ಇದ್ದಿತಾದ್ದರಿಂದ ಆಗ ತಾನೆ ಒಳಸೇರಿದ ವ್ಯಕ್ತಿಗಳ ಮುಖಗಳು ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ ಬಾಗಿಲನ್ನು ತೆರೆಯು ವುದಕ್ಕೆ ಸ್ವತಃ ನರಜೀವನದಾಸರೇ ಬಂದಿದ್ದರು. ಈ ವ್ಯವಹಾರ ಅತ್ಯಂತ ರಹಸ್ಯವಾಗಿರಬೇಕೆಂದು ಸಂಬಂಧಪಟ್ಟವರೆಲ್ಲರ ಇಷ್ಟವಾಗಿದ್ದುದರಿಂದ ಆಗ ಅವನು ಗೋವರ್ಧನನನ್ನಾಗಲಿ, ಆಳುಗಳನ್ನಾಗಲಿ ಅಲ್ಲಿ ಇಟ್ಟುಕೊಂಡಿರಲಿಲ್ಲ. ಹಿರಾಸಿಂಗ ಸಾಲಿಸಿಟರು ರತ್ನಗೋಲವನ್ನು ಖಾಸಗೀ ರೀತಿಯಿಂದ ಪ್ರದರ್ಶಿ ಸಿದರೆಂಬ ವಿಚಾರ ಮಹಾರಾಜರಿಗೇನಾದರೂ ತಿಳಿದಿದ್ದರೆ ಅವರಿಗೆ ಕೋಪ ಬರುವ ಸಂಭವವಿತ್ತು. ಹಾಗೇ ಈ ವಿಚಾರ ಹೊರಬಿದ್ದಲ್ಲಿ ಬಾಬೂರಾಯ ರಿಗೂ ಸಿಟ್ಟುಬರುವ ಸಂಭವವಿತ್ತು. ಅರ್ಥಾತ್ ಶೇಟಜಿ, ಹಿರಾಸಿಂಗ, ಜಾಧವ ಹಾಗೂ ಪದ್ಮಾಕರರ ವಿನಾ ಐದನೆಯವರಾರೂ ಆಗ ಅಲ್ಲಿ ಪ್ರವೇಶಿಸು ವಂತಿರಲಿಲ್ಲ. ನರಜೀವನದಾಸರಿಗಂತೂ ಹಾಗೆನ್ನಿಸುತ್ತಿದ್ದುದು ನಿಜ. ಈ ವಿಚಾರ ಬೇರಾರಿಗೂ ತಿಳಿಯದೆಂಬೇ ಅವರ ಭಾವನೆ, ಅರ್ಥಾತ್ ಆಗ ಒಳ ಸೇರಿದ ಇಬ್ಬರು ವ್ಯಕ್ತಿಗಳು ಪದ್ಮಾಕರ ಮತ್ತು ಜಾಧವರೇ ಇರಬೇಕೆಂದು ಅವರು ನಂಬಿದ್ದರು. ಅವರೊಂದಿಗೆ ಒಳಗಿನ ಕೊಟಡಿಗೆ ಹೋಗುತ್ತಿದ್ದ ಹಾಗೆ ಶೇಟಜಿ ಒಂದು ಸಲ ಹೊರಳಿ ನೋಡಿದರು. ತಮ್ಮ ಜೊತೆಗೆ ಬರುತ್ತಿದ್ದವರು ತಮ್ಮ ಪರಿಚಿತರಲ್ಲವೆಂಬುದು ತಕ್ಷಣ ಅವರಿಗೆ ತಿಳಿದು ಬಂದಿತು. ಏನು ಮಾಡುವುದೆಂದು ಅವರು ಯೋಚಿಸುತ್ತಿರುವಷ್ಟರಲ್ಲೇ ಸಂತಾಜಿ ಅವರ ಮೈಮೇಲೆ ಬಿದ್ದ. ಶೇಟಜಿಯ ಕತ್ತನ್ನು ಗಟ್ಟಿಯಾಗಿ ಒತ್ತಿ ಹಿಡಿದ. ಶೇಟಜಿ ವಯಸ್ಕರಾದ್ದರಿಂದ ಈ ಒರಟು ದಾಳಿಯನ್ನು ತಡೆಯ ಲಾರದೆ ಅವರು ಒಮ್ಮೆಲೆ ನೆಲಕ್ಕುರುಳಿದರು. ಅವರಿಗೆ ಮೂರ್ಛೆ ಬಂದಿತ್ತು. ಪ್ರಾಣ ಹೋಗುವ ಸ್ಥಿತಿಯಿತ್ತೋ ಏನೊ ಯಾರು ಬಲ್ಲರು. ಶೇಟಜಿಯ ಗತಿ ಕೊನೆಗಂಡಿತೆಂದು ತಿಳಿದು ಅವರಿಬ್ಬರೂ ಒಳಗಡೆ ನಡೆದರು.

ಒಳಗಿನ ಕೊಟಡಿಯಲ್ಲಿ ಇಬ್ಬರೂ ಪ್ರವೇಶಿಸಬೇಕಾದ ಅಗತ್ಯವಿಲ್ಲವೆಂ ಬುದು ಕಂಡುಬರುತ್ತಲೂ ಸಂತಾಜಿ, ಧನಾಜಿಗೆ ಹೊರಗಡೆ ನಿಲ್ಲುವಂತ ಸೂಚಿ ಸಿದ. ಸಂತಾಜಿ ಒಳಸೇರಿದಾಗ ಹಿರಾಸಿಂಗ ಸಾಲಿಸಿಟರು ಬಾಗಿಲಿನ ಕಡೆಗೆ ಬೆನ್ನುಮಾಡಿ ಮೇಜಿನ ಹತ್ತಿರ ನಿಂತುಕೊಂಡಿದ್ದುದು ಕಾಣಿಸಿತು. ಮೇಜಿನ

ಮೇಲಿದ್ದ ರತ್ನಗೋಲದ ಮೇಲೆ ಅವರ ದೃಷ್ಟಿ ಸ್ಥಿರವಾಗಿ ನೆಲಸಿದ್ದಿತು. ಈ ರತ್ನಗೋಲವನ್ನು ಹೊತ್ತುಕೊಂಡು ಹೋಗಲೆಂದೇ ಬಾಬೂರಾಯರು ಸಂತಾಜಿಯನ್ನು ನಿಯಮಿಸಿದ್ದರು. ಆ ಬಹುಮೂಲ್ಯ ವಸ್ತುವಿನ ವರ್ಣನೆಯನ್ನಾತ ಈ ಮೊದಲೇ ಕೇಳಿದ್ದನಾದರೂ ದೇದೀಪ್ಯಮಾನವಾದ ರತ್ನಗಳಿಂದ ಕೂಡಿದ ಆ ತೇಜಃಪುಂಜ ರತ್ನಗೋಲ ಮೊದಲ ಸಲ ದೃಷ್ಟಿಗೆ ಬೀಳುತ್ತಲೂ ಅವನ ಮುಖದಿಂದ ಆಶ್ಚರ್ಯೋದ್ಗಾರವೊಂದು ಹೊರಬಿತ್ತು. ಆ ದನಿ ಕಿವಿಗೆ ಬಿದ್ದೊಡನೆ ಹಿರಾಸಿಂಗ ಹೊರಳಿ ನೋಡಿದರು. ಸಂತಾಜಿಯು ಆ ತೀವ್ರದೃಷ್ಟಿಯನ್ನು ಕಂಡು ಅವರ ಕೈಕಾಲೇ ಹೋದಂತಾಯಿತು. ಅವರಿನ್ನು ಕೂಗಿಕೊಳ್ಳುತ್ತಿದ್ದರೇನೊ, ಅಷ್ಟರಲ್ಲಿ ಸಂತಾಜಿ ತನ್ನ ಜೇಬಿನಿಂದ ಪಿಸ್ತೂಲನ್ನು ಹೊರದೆಗೆದು ಸಾಲಿಸಿಟರ ಮೇಲೆ ಗುಂಡು ಹಾರಿಸಿದ. ಶೇಟಜಿಯು ಕತ್ತು ಹಿಸುಕಿದ ಹಾಗೆ ಹಿರಾಸಿಂಗರ ಮೈಮೇಲೆ ಬಿದ್ದು ಅವರ ಕೆಲಸ ತೀರಿಸುವುದು ಕಷ್ಟಸಾಧ್ಯವೆಂಬುದು ಮೊದಲೇ ತಿಳಿದುದರಿಂದ ಆತ ಗುಂಡು ಹಾರಿಸಿದ್ದ.

'ಸೈಲೆನ್ಸರ್' ಯಂತ್ರವನ್ನು ಪಿಸ್ತೂಲಿನ ಮೇಲೆ ಕೂಡಿಸಿದ್ದಿತಾದ್ದರಿಂದ ಗುಂಡು ಹಾರಿದಾಗ ಹೆಚ್ಚು ಸದ್ದಾಗಲಿಲ್ಲ. ಗುಂಡಿನೇಟಿನಿಂದಾಗಿ ಹಿರಾಸಿಂಗ ಕ್ಷಣಾರ್ಧದಲ್ಲಿ ಪ್ರಾಣ ಬಿಟ್ಟರು. ಅವರ ಶವವನ್ನು ಎಳೆದುಕೊಂಡು ಬಂದು ಸಂತಾಜಿ ಹೊರಗಿನ ಕೋಟಡಿಯಲ್ಲಿಟ್ಟನು. ಆಗ ಅಲ್ಲಿ ಬಿದ್ದಿದ್ದ ಶೇಟಜಿಯ ದೇಹ ಅಲುಗಾಡಿದಂತೆ ತೋರಿತು. 'ಮುದುಕನನ್ನು ತೆಪ್ಪಗಿರಿಸು' ಎಂದು ಸಂತಾಜಿ ಧನಾಜಿಗೆ ಹೇಳಿದ. ಸರಿ. ಬಡಪಾಯಿ ಶೇಟಜಿಯ ದೇಹದಲ್ಲಿ ಉಳಿದಿದ್ದ ಚಟುವಟಿಕೆಯೂ ತೀರಿಹೋಯಿತು.

ಆ ತೇಜಸ್ವಿ ರತ್ನಗೋಲ ಮೂಕವಾಗಿ ಈ ಭೀಕರ ಘಟನೆಗಳನ್ನು ನಿರೀಕ್ಷಿಸುತ್ತಿದ್ದಿತು. ಅದರ ಪ್ರಾಪ್ತಿಗಾಗಿ, ಅದರ ಎದುರಿಗೇ ಇದುವರೆಗೆ ಇಂಥ ಘಟನೆಗಳೆಷ್ಟು, ನಡೆದಿದ್ದವೊ! ಆ ಮೂಕ ಗೋಲಕ್ಕೆ ಬಾಯಿ ಬಂದಿದ್ದರೆ ಪ್ರಾಚೀನ ಇತಿಹಾಸದೊಂದಿಗೆ ಇಂಥ ಕತೆಗಳೆಷ್ಟೊ ಬೆಳಕಿಗೆ ಬರಬಹುದಾಗಿತ್ತು. ಆ ಗೋಲದ ಮೇಲೆ ಕೂಡಿಸಿದ ರತ್ನಗಳಲ್ಲಿ ಅನೇಕ ರತ್ನಗಳು ಅತ್ಯಂತ ಘಾತಕವಾದವುಗಳೆಂದು ಜನರ ಕಲ್ಪನೆಯಿದ್ದುದರಿಂದಲೇ ಅದನ್ನು ಸೋಮನಾಥ ದೇವಾಲಯಕ್ಕೆ ಅರ್ಪಿಸಲಾಗಿದ್ದಿತು. ಈ ಗೋಲವನ್ನಿಟ್ಟು

ಕೊಂಡ ಮನೆತನದಲ್ಲಿ ಪ್ರತಿಯೊಂದು ಪೀಳಿಗೆಗೂ ಯಾವುದಾದರೊಂದು ಗಂಡಾಂತರ ಬಂದೇ ಬರುತ್ತಿದ್ದಿತೆಂದು ಜನಗಳ ಭಾವನೆಯಿತ್ತು. ಇರಲಿ.

ರತ್ನಗೋಲದ ನೈಜತೆ ಇಲ್ಲವೆ ಕೃತ್ರಿಮತೆಗಳ ಪರೀಕ್ಷೆ ನಡಸುವ ಸಮಯವಾಗಿರಲಿಲ್ಲ ಅದು. ಅದನ್ನೆತ್ತಿಕೊಂಡು ಒಡನೆಯೆ ಅಲ್ಲಿಂದ ಫರಾರಿ ಯಾಗುವದೊಂದೇ ಅವರ ಕರ್ತವ್ಯವಾಗಿತ್ತು. ಹೀರಾಸಿಂಗರು ಅದನ್ನಲ್ಲಿಗೆ ತೆಗೆದುಕೊಂಡು ಬಂದಾಗ ಅದರ ಪೆಟ್ಟಿಗೆಯನ್ನು ತಂದಿದ್ದರು. ರತ್ನಗೋಲ ವನ್ನು ಅದರ ಪೆಟ್ಟಿಗೆಯಲ್ಲಿರಿಸಿ, ಅಕ್ಕಪಕ್ಕದಲ್ಲಿ ಕಾಗದ, ಅರಳೆ ಇತ್ಯಾದಿ ಗಳನ್ನು ತುಂಬಿ ಸಂತಾಜಿ ಮುಚ್ಚಳ ಹಾಕಿದ. ಅನಂತರ ಬಾಗಿಲುಗಳನ್ನೆಲ್ಲ ಮುಚ್ಚಿ ರಸ್ತೆಯ ಮೇಲಿನ ಗಸ್ತಿನ ಶಿಪಾಯಿ ಅತ್ತ ಹೊರಳಲಿಲ್ಲವೆಂಬುದನ್ನು ಕಂಡುಕೊಂಡು ಅವರಿಬ್ಬರೂ ಹೊರಗೆ ಬಂದು ರತ್ನಗೋಲದ ಪೆಟ್ಟಿಗೆಯನ್ನು ಮೋಟಾರಿನಲ್ಲಿಟ್ಟರು. ಎದುರಿಗಿನ ಮೋಟಾರಿನಲ್ಲಿನ ಡ್ರೈವರನ ಕಡೆಗೆ ಬೆರಳು ಮಾಡಿ ಸಂತಾಜಿ 'ಏನು ವಿಚಾರ?' ಎಂದು ಪಿತಾಜಿಗೆ ಸನ್ನೆ ಮಾಡುತ್ತಲೂ ಆತ ಆಕಾಶದ ಕಡೆ ಬೆರಳು ತೋರಿಸಿದ. ಅದನ್ನು ಕಂಡು ತ್ರಿಮೂರ್ತಿಗಳ ಮುಖದ ಮೇಲೆ ಭೀಷಣವಾದ ನಗೆ ಮೂಡಿ ಬಂತು. ಮೂವರೂ ಮೋಟಾರಿನಲ್ಲಿ ಏರಿ ಕುಳಿತುಕೊಳ್ಳುತ್ತಲೂ ಪಿತಾಜಿ, ಸೆಲ್ಫ್ ಸ್ಟಾರ್ಟರಿನ ಕೀಲಿ ಒತ್ತಿ ಮೋಟರನ್ನು ಮುಂದೆ ಸಾಗಿಸಿದ.

ಮೂರು ಕೊಲೆ, ಒಂದು ಭಾರಿ ಕಳವು ಮಾಡಿ ಮುಗಿಸಬೇಕಾದರೆ ನಮ್ಮ ತ್ರಿಮೂರ್ತಿಗಳಿಗೆ ಕೇವಲ ಎಂಟು ನಿಮಿಷಗಳ ಅವಧಿ ಸಾಕಾಗಿದ್ದಿತು ಅವರ ಮೋಟಾರು ಆ ಬೀದಿಯನ್ನು ಬಿಟ್ಟು ಬೇರೆ ಬೀದಿಗೆ ಹೊರಳಿರಲಿಲ್ಲ ಅಷ್ಟರಲ್ಲೇ ಗಸ್ತು ತಿರುಗುವ ಶಿಪಾಯಿ ಬೇರೆ ಮೂಲೆಯಿಂದ ಆ ಬೀದಿಗೆ ಬಂದ ನರಜೀವನದಾಸರ ಅಂಗಡಿಯೆದುರಿಗೆ ಆತ ಬಂದಾಗ ಅಲ್ಲಿ ಎರಡು ಮೋಟಾರು ನಿಂತುಕೊಂಡಿದ್ದವು. ಹಿಂದಿನ ಮೋಟಾರಿನಿಂದ ಅಪ್-ಟು-ಡೇಟ್ ಡ್ರೆಸ್ ಮಾಡಿದ ತರುಣರಿಬ್ಬರು ಕೆಳಗಿಳಿಯುತ್ತಿದ್ದರು. ರಾತ್ರಿ ಕಾಲದಲ್ಲಿ ಆ ಅಂಗಡಿಗೆ ಯಾರೂ ಬರುವುದಿಲ್ಲವೆಂಬ ವಿಚಾರ ಆ ಪೋಲೀಸನಿಗೆ ಚೆನ್ನಾಗಿ ಗೊತ್ತಿದ್ದಿತು. ಈ ರಾತ್ರಿ ಮಾತ್ರ ಮೇಲಿಂದ ಮೇಲೆ ಇಲ್ಲಿ ಮೋಟಾರುಗಳು ಬರಲು ಕಾರಣವೇನೆಂಬುದು ಅವನಿಗೆ ಹೊಳೆಯಲಿಲ್ಲ. ಸಾಮಾನ್ಯವಾಗಿ

ಪೋಲೀಸರೆಲ್ಲರೂ ಸಂಶಯಪ್ರಸ್ತರಾಗಿರುತ್ತಾರೆ. ಈ ಗಸ್ತಿನ ಶಿಪಾಯಿಗೂ ಸಂದೇಹ ಬಂದಿರಲಿಲ್ಲ. ಈ ರಹಸ್ಯವನ್ನು ಭೇದಿಸಲೆಂದು ಆತ ಅಂಗಡಿಯ ಮೆಟ್ಟಲುಗಳನ್ನೇರತೊಡಗಿದ.

ಆಗಲೂ ಹೊರಗಿನ ಕೋಣೆಯಲ್ಲಿ ಮೊದಲಿನಂತೆ ದೀಪ ಉರಿಯು ತ್ತಿತ್ತು. ಪದ್ಮಾಕರನೂ, ಜಾಧವನೂ ಬಾಗಿಲ ಮೇಲೆ ಬೆರಳು ತಟ್ಟುತ್ತಿ ದ್ದರು. ಅವರೊಂದಿಗೇ ಒಳಸೇರಬೇಕೆಂದು ಪೋಲೀಸನೂ ಕಾದಿದ್ದ. ಆದರೆ ಎಷ್ಟು ಹೊತ್ತಾದರೂ ಒಳಗಿನಿಂದ ಯಾರೂ ಬರಲಿಲ್ಲ. ಶಿಪಾಯಿ ಬಾಗಿಲನ್ನು ಕೊಂಚ ಜೋರಾಗಿ ನೂಕಿದ.

ಒಳಗಿನ ಕೋಣೆಯಲ್ಲಿನ ಭೀಕರ ದೃಶ್ಯವನ್ನು ಕಂಡು ಆತ ಸ್ತಂಭೀ ಭೂತನಾಗಿ ನಿಂತುಕೊಂಡ.

೫

## ಅಪರಾಧದ ಸಮಾಚಾರ

ಮುಂಬಯಿಯಲ್ಲಿ ಡಿಟೆಕ್ಟಿವ್ ರಾಮರಾಯರ ಹೆಸರನ್ನು ತಿಳಿಯದವ ರಾರಿದ್ದಾರೆ? ಕಳ್ಳರು-ಕಾಕರು, ದರೋಡೆಗಾರರು, ಅಪರಾಧಿಗಳು ಎಲ್ಲರೂ ಅವರ ಹೆಸರು ಕೇಳಿದೊಡನೆ ನಡುಗುವರು. ಗಾಂವದೇವಿಯಲ್ಲಿ ಅವರ ಬಂಗಲೆ ಇದೆ. ಅಲ್ಲಿ ಅವರು ತಮ್ಮ ಸಂಸಾರದೊಂದಿಗೆ ಸುಖವಾಗಿ ವಾಸ ವಾಗಿದ್ದಾರೆ.

ಹಿಂದಿನ ಪ್ರಕರಣದಲ್ಲಿ ನಡೆದ ಘಟನೆಯ ಮರುದಿನ ಬೆಳಗ್ಗೆ ರಾಮ ರಾಯರು ತಮ್ಮ ದಿವಾನಖಾನೆಯಲ್ಲಿ ಕುಳಿತುಕೊಂಡು ಚಹ ತೆಗೆದುಕೊಳ್ಳು ತ್ತಿದ್ದಾಗ ಪೋಲೀಸ್ ಇನ್ಸಪೆಕ್ಟರ್ ಮೋರೆ ಸಾಹೇಬರು ಅಲ್ಲಿಗೆ ಬಂದರು. ಸಾಮಾನ್ಯವಾಗಿ ಪೋಲೀಸ್ ಇನ್ಸಪೆಕ್ಟರೆಂದರೆ ಅವರ ಮುಖದ ಮೇಲೆ ಒರಟುತನ ಕಾಣುವುದು ಸ್ವಾಭಾವಿಕ. ಆದರೆ ಇನ್ಸಪೆಕ್ಟರ್ ಮೋರೆ ಈ ನಿಯಮಕ್ಕೆ ಅಪವಾದವಾಗಿದ್ದರು. ಬಿ. ಎ. ಪಾಸು ಮಾಡಿದ ನಂತರ ಮನೆ

ತನದ ತೊಂದರೆಗಳಿಗೊಳಪಟ್ಟು ಅವರು ಈ ನೌಕರಿಗೆ ಸೇರಬೇಕಾಗಿ ಬಂದಿತ್ತು. ಸಾಮಾನ್ಯವಾಗಿ ಪೋಲೀಸರ ತಲೆಯಲ್ಲಿ ಸಿಕ್ಕಲಾರದ ವೆ ದುಳು ವೇಗವಾಗಿ ಕೆಲಸ ಮಾಡುತ್ತಿದ್ದುದರಿಂದ ಗುಪ್ತ ಪೋಲೀಸ್ ಶಾಖೆಯಲ್ಲಿ ಅವರನ್ನು ಸೇರಿಸಲಾಗಿದ್ದಿತು. ಅಪರಾಧಗಳನ್ನು ಹುಡುಕಿ ತೆಗೆಯುವುದರಲ್ಲಿ ರಾಮುರಾಯರು ಪಳಗಿದವರೆಂಬುದು ಮೋರೆಯುವರಿಗೆ ಚೆನ್ನಾಗಿ ಗೊತ್ತಿದ್ದಿತು. ಅಂತೆಯೆ ಅವರ ಬಗ್ಗೆ ಮೋರೆ ಬಹಳ ಗೌರವದಿಂದಿದ್ದರು. ಯಾವುದೊಂದು ಪ್ರಕರಣದಲ್ಲಿ ಸಮಸ್ಯೆಯೊಂದು ತಲೆದೋರಿದಾಗ ಅವರು ರಾಮುರಾಯರ ಹತ್ತಿರ ಸಲಹೆಗಾಗಿ ಬರುತ್ತಿದ್ದರು. ಜ್ಞಾನಸಂಪಾದನೆಯ ಆಸಕ್ತಿ, ವಿದ್ಯಾರ್ಥಿಗಳಿಗೊಪ್ಪುವ ಲೀನತೆ ಅವರಲ್ಲಿದ್ದುದರಿಂದ ರಾಮುರಾಯರಿಗೂ ಮೋರೆಯವರ ಬಗ್ಗೆ ಬಹಳ ಪ್ರೀತಿಯಿತ್ತು.

ಮೋರೆಯುವರು ಅಲ್ಲಿಗೆ ಬಂದಾಗ ರಾಮುರಾಯರ ಹಸ್ತಕರಾದ ಭಾಲೇರಾಯರೂ ಅಲ್ಲಿದ್ದರು. ಮೋರೆಯುವರಿಗಾಗಿ ಉಪಹಾರ ಹಾಗೂ ಚಹ ಬಂದಿತು. ಅದನ್ನೆಲ್ಲ ಮುಗಿಸಿದ ನಂತರ ರಾಮುರಾಯರು ಸಿಗರೇಟು ಹತ್ತಿಸಿ 'ಏನು ಸಾಹೇಬರೆ, ಸವಾರಿ ಇಷ್ಟು ಬೇಗ ಬಂತು ಇವೊತ್ತು? ಏನಾದರೂ ವಿಶೇಷ ಸಮಾಚಾರವೊ?' ಎಂದರು.

'ವಿಶೇಷ ಏನು ಬಂತು ರಾಯರೆ, ಯಾವಾಗಲೂ ಇದ್ದೇ ಇರುತ್ತದಲ್ಲ ಗಲಾಟೆ. ಇವೊತ್ತಿನ 'ಟೈಮ್ಸ್' ನೋಡಿದಿರಾ?'

'ಶೇರುಗಳ ದರ ಮುಂತಾದ್ದನ್ನು ನೋಡುತ್ತಿದ್ದೆ.'

'ಹಾಗಾದರೆ ನಿನ್ನೆ ರಾತ್ರಿ ಮೋತೀಬಜಾರಿನಲ್ಲಾದ ಖೂನಿಗಳ ವಿಚಾರ ನೀವು ಓದಿಲ್ಲವೆ?'

ಇಲ್ಲ, ಯಾರ ಖೂನಿಯಾಯಿತು? ಎಲ್ಲಾಯಿತು?' ರಾಮುರಾಯರು ಉತ್ಸುಕತೆಯಿಂದ ಕೇಳಿದರು

'ನರಜೀವನದಾಸ ಶೇಟಜಿ ತಮಗೆ ಗೊತ್ತಿರಬಹುದಲ್ಲವೆ?'

'ಹೋ, ಗೊತ್ತಿರದೇನು? ಅವರೂ ನಾನೂ ಒಳ್ಳೆಯ ಸ್ನೇಹಿತರು.'

‘ ಇಂದು ನೀವು ಹೀಗೆ ಹೇಳಲಾರಿರಿ ಅವರೂ ನೀವೂ ಒಳ್ಳೆಯ ಸ್ನೇಹಿತರಾಗಿದ್ದಿರಿ—ಎನ್ನಬಹುದು.’

‘ ಅಂದರೆ? ಅವರದೆ ಖೂನಿ ಆಗಿದೆಯೋ ಹೇಗೆ?’

‘ ಹೌದು, ಅವರದೇ. ಹಿರಾಸಿಂಗ ಸಾಲಿಸಿಟರ ಹೆಸರನ್ನೂ ನೀವು ಕೇಳಿರಬೇಕು?’

‘ ಹೌದು. ಅವರ ಸಮಾಚಾರ ಏಕೆ ಈಗ?’

‘ ಅವರದೂ ಖೂನಿಯಾಗಿದೆ.’

ರಾಮರಾಯರು ದಿಗಿಲುಗೊಂಡು—‘ ಏನು ಹೇಳುತ್ತಿದ್ದೀರಿ ಮೋರೆ ಸಾಹೇಬರೆ? ಈ ಖೂನಿಗಳ ಪಟ್ಟಿ ಇನ್ನೂ ಎಷ್ಟು ದೊಡ್ಡದಿದೆ?’

‘ ಇನ್ನು ಒಂದೇ ಒಂದು ವ್ಯಕ್ತಿ. ಆತ ಹಿರಾಸಿಂಗರ ಮೋಟಾರಿನ ಡ್ರೈವರು.’

‘ ಸರಿ ಹಾಗಾದರೆ. ದೊಡ್ಡ ಕೇಸ್ ಆದಂತಾಯ್ತು ಇದು. ವೃತ್ತಪತ್ರದಲ್ಲಿ ಇದನ್ನೇಕೆ ಓದುವುದು? ನೀವೇ ವಿವರವಾಗಿ ಹೇಳಿಬಿಡಿರಲ್ಲ?’

‘ ಆದಕ್ಕಾಗಿಯೆ ನಾನಿಲ್ಲಿಗೆ ಬಂದಿದ್ದೇನೆ. ನಿನ್ನೆಯಿಂದ ಈ ಬಗ್ಗೆ ನನ್ನ ಕಿವಿಗೆ ಬಿದ್ದ ಅಲ್ಪಸ್ವಲ್ಪ ಮಾಹಿತಿಯನ್ನು ಒಂದುಗೂಡಿಸಿ ಈ ಖೂನಿಗಳ ಕತೆಯನ್ನು ತಯಾರಿಸಿದ್ದೇನೆ. ಈ ಮೂರು ಕೊಲೆಗಳ ಸುದ್ದಿ ಗುಪ್ತ ಪೋಲೀಸ್ ಶಾಖೆಗೆ ಬಂದಾಗ ಒಂಬತ್ತೂವರೆ ಗಂಟೆಯಾಗಿತ್ತು. ಆಗ ನಾನೇ ಡ್ಯೂಟಿಯ ಮೇಲಿದ್ದುದರಿಂದ ತಪಾಸಣೆಗಾಗಿ ನಾನೇ ಹೋಗಬೇಕಾಯಿತು.’ ಎಂದು ಹೇಳಿ ಮೋರೆ ಮುಂದುವರಿಸಿದರು: ‘ ಮೋತೀಬಜಾರದಲ್ಲಿನ ನರಜೀವನದಾಸ ಶೇಟಜಿಯ ಅಂಗಡಿಯ ಹೊರಗಿನ ಕೋಣೆಯಲ್ಲಿ ಸ್ವತಃ ಶೇಟಜಿ ಮತ್ತು ಹಿರಾಸಿಂಗರ ಶವಗಳು ಬಿದ್ದುಕೊಂಡಿದ್ದವು. ಹಿರಾಸಿಂಗರ ಹಣೆಯ ಮೇಲೂ ನರಜೀವನದಾಸರ ಎದೆಯ ಮೇಲೂ ಗುಂಡಿನ ಗಾಯಗಳಾಗಿದ್ದವು. ಅಲ್ಲದೆ ನರಜೀವನದಾಸರ ಹಣೆಯ ಮೇಲೆ ಇನ್ನೊಂದು ಗಾಯವಾಗಿದೆ. ಅದು ದಂಡದಿಂದಾಗಿದ್ದಿತು

'ಮೋಟಾರ್ ಡ್ರೈವರನ ಕೊಲೆ ಮೋಟಾರಿನಲ್ಲೇ ನಡೆದಿರಬೇಕು. ಆತ ಮೈಮರೆದು ಕುಳಿತುಕೊಂಡಿದ್ದಾಗ ಹಿಂದಿನಿಂದ ಬಂದು ಅವನ ಮೇಲೆ ದಾಳಿ ಮಾಡಿದಂತೆ ತೋರುತ್ತೆ.

'ಆ ಭಾಗದಲ್ಲಿ ಗಸ್ತು ತಿರುಗುವ ಪೋಲೀಸ್ ಶಿಪಾಯಿಯ ಹೇಳಿಕೆಯೂ ಬಹಳ ಮಹತ್ವದ್ದಾಗಿದೆ. ಎಂಟೂಮುಕ್ಕಾಲು ಗಂಟೆಯಾಗಿದ್ದಾಗ ನರಜೀವನ ದಾಸರು ಮೋಟಾರಿನಿಂದಿಳಿದು ಅಂಗಡಿಯೊಳಕ್ಕೆ ಹೋಗುವುದನ್ನು ತಾನು ಕಂಡೆನಾಗಿ ಆತ ಹೇಳುತ್ತಾನೆ. ಒಳಗೆ ಹೋಗಿ ದೀಪ ಹತ್ತಿಸಿದ ತರುವಾಯ ಅವರು ಹೊರಗೆ ಬಂದು ಮೆಟ್ಟಿಲುಗಳ ಮೇಲೆ ನಿಂತುಕೊಂಡರು. ಕೊಂಚ ಕಾಲದಲ್ಲಿಯೆ ಬಂದು ಮೋಟರು ಬಂದು ಅಲ್ಲಿ ನಿಂತುಕೊಂಡಿತು. ಆ ಗಾಡಿ ಯಿಂದಿಳಿದ ವ್ಯಕ್ತಿಯೊಂದಿಗೆ ಹಸ್ತಾಂದೋಲನ ಮಾಡಿ ಶೇಟಜಿ ಆತನನ್ನು ಸ್ವಾಗತಿಸಿದರು. ಅವರಿಬ್ಬರೂ ಫುಟ್‌ಪಾತ್ ಮೇಲೆ ಮಾತನಾಡುತ್ತ ನಿಂತಿ ದ್ದಾಗ ಡ್ರೈವರನು ಗಾಡಿಯೊಳಗಿನಿಂದ ಒಂದು ಪುಟ್ಟ ಆದರೆ ಭಾರವಾದ ಪೆಟ್ಟಿಗೆಯನ್ನೆತ್ತಿ ಅಂಗಡಿಯೊಳಕ್ಕೆ ನಡೆದರು ಆ ಮೋಟಾರ್ ಡ್ರೈವರನ ಬಳಿ ಕೆಲಹೊತ್ತು ಹರಟೆ ಕೊಚ್ಚಿದ ತರುವಾಯ ಆ ಮೋಟಾರು ಹಿರಾಸಿಂಗ ಸಾಲಿಸಿಟರದೆಂಬುದು ತಿಳಿದುಬಂದಿತು. ಆತ ತನ್ನ ಗಸ್ತು ಸುತ್ತಲು ಮುಂದೆ ಹೊರಟ. ಬೇರೊಂದು ಬೀದಿಗೆ ಆತ ಹೊರಳುತ್ತಿದ್ದ ಹಾಗೇ ಇನ್ನೊಂದು ಮೋಟಾರು ಬಂದು ಸಾಲಿಸಿಟರ ಮೋಟಾರಿನ ಹಿಂದೆ ನಿಂತುಕೊಂಡಿತು. ಅಚ್ಚ ಸಾಹೇಬರ ಹಾಗೆ ಡ್ರೆಸ್ ಮಾಡಿದ ವ್ಯಕ್ತಿಗಳಿಬ್ಬರು ಆ ಗಾಡಿಯಿಂದಿ ಳಿದು ಅಂಗಡಿಯೊಳಕ್ಕೆ ಹೋದುದನ್ನು ತಾನು ನೋಡಿದುದಾಗಿ ಆತ ಹೇಳು ತ್ತಾನೆ. ಒಂದು ಸುತ್ತು ಮುಗಿಸಿ ಆತ ಮರಳಿ ಅದೇ ಬೀದಿಗೆ ಹೊರಳಿದಾಗ ಅಂಗಡಿಗೆ ಇನ್ನೊಂದು ಮೋಟಾರು ಬಂದು ನಿಂತುಕೊಂಡಿತು. ಅದರಿಂದಲೂ ಅಪ್-ಟು-ಡೇಟ್ ಡ್ರೆಸ್ ಮಾಡಿದ ಇಬ್ಬರು ವ್ಯಕ್ತಿಗಳು ಕೆಳಕ್ಕಿಳಿದರು. ಮೆಟ್ಟಿಲುಗಳನ್ನೇರಿ ಅವರು ಮೇಲೆ ಹೋಗುತ್ತಿದ್ದರು. ರಾತ್ರಿ ಕಾಲದಲ್ಲಿ ನರಜೀವನದಾಸರ ಅಂಗಡಿಯ ಮುಂದೆ ಎಂದೂ ದೀಪವಿರುವುದಿಲ್ಲ. ಅಂಗಡಿ ಯನ್ನು ಮುಚ್ಚಿದ ಬಳಿಕ ಶೇಟಜಿಯಾಗಲಿ, ಅವನ ಕಾರಕೂನನಾಗಲಿ ಎಂದೂ ಆ ಕಡೆ ಹೊರಳುವುದಿಲ್ಲ. ಈ ಪದ್ಧತಿ ಪೋಲೀಸನಿಗೆ ಗೊತ್ತಿದ್ದಿತಾದ್ದರಿಂದ ಇಂದು ಅಲ್ಲಿ ಮೋಟರಿನ ಮೇಲೆ ಮೋಟಾರು ಬರುವುದನ್ನು ಕಂಡಾಗ

ಸಂಶಯು ಬರದಿರಲಿಲ್ಲ. ಇದೇನು ನಡೆದಿದೆಯೆಂದು ನೋಡುವುದಕ್ಕಾಗಿ ಆತ ಒಳಗೆ ನುಗ್ಗಿದ. ಒಳಗಡೆ ಎರಡು ಕೊಲೆಗಳಾದುದು ಕಂಡು ಬರುತ್ತಲೂ ಆತ ಆ ಇಬ್ಬರು ವ್ಯಕ್ತಿಗಳೊಂದಿಗೆ ಹೊರಗೆ ಬಂದ. ಹೀರಾಸಿಂಗ ಸಾಲಿಸಿಟರ ಮೋಟಾರಿನ ಡ್ರೈವರು ಸ್ವಸ್ಥವಾಗಿ ಸೀಟಿನ ಮೇಲೆ ಕುಳಿತಿದ್ದ. ಅವನು ನಿದ್ರೆ ಮಾಡುತ್ತಿರಬಹುದೆಂದು ಭಾವಿಸಿ ಪೋಲೀಸನು ಅವನನ್ನು ಅಲುಗಾಡಿಸಿ ನೋಡಿದ. ಅವನಿಗೆ ಹೇಗೆ ತಾನೇ ಎಚ್ಚರವಾದೀತು? ಆ ರಾತ್ರಿ ತಾನು ಅಲ್ಲಿಯೆ ಸಮೀಪದಲ್ಲಿ ಸುತ್ತುತ್ತಿದ್ದರೂ ಪಿಸ್ತೂಲಿನ ಸಪ್ಪಳ ಕೇಳಿಬರಲಿಲ್ಲ ವೆಂದು ಶಿಪಾಯಿ ಹೇಳುತ್ತಾನೆ.'

'ಅವರು ಪಿಸ್ತೂಲಿಗೆ ಸೈಲೆನ್ಸರ್ ಹಚ್ಚಿರಬೇಕು' ಎಂದರು ರಾಮ ರಾಯರು.

'ನಾನೂ ಹಾಗೇ ತರ್ಕಿಸಿದ್ದೆ' ಎಂದು ಇನ್ಸಪೆಕ್ಟರ ಮೋರೆ ಮುಂದೆ ಸಾಗಿದರು: 'ಈ ಮೂರನೆಯ ಕೊಲೆಯನ್ನು ಕಂಡೊಡನೆ ಪೋಲೀಸನು ಆ ಇಬ್ಬರು ವ್ಯಕ್ತಿಗಳಿಗೆ ಅನೇಕ ಅಡ್ಡತಿಡ್ಡ ಪ್ರಶ್ನೆ ಕೇಳಿದ. ಅವರನ್ನು ಜೊತೆಗೆ ಕರೆದುಕೊಂಡು ಆತ ವರದಿ ಕೊಡಲು ಪೋಲೀಸ್ ಸ್ಟೇಶನ್ನಿಗೆ ಬಂದ.

'ಪೋಲೀಸ್ ಸ್ಟೇಶನ್ನಿನಲ್ಲಿ ಈ ಇಬ್ಬರು ವ್ಯಕ್ತಿಗಳೂ ಬಹಳ ಸಭ್ಯತನ ದಿಂದ ವರ್ತಿಸಿದರು. ಅವರು ತಮ್ಮ ಹೆಸರು ವಿಳಾಸಗಳ ಕಾರ್ಡು ತೋರಿಸಿ ದರು. ನರಜೀವನದಾಸರ ಕಡೆಗೆ ತಾವು ಯಾವ ಕೆಲಸದ ನಿಮಿತ್ತ ಹೋದು ದೆಂಬುದನ್ನು ಮಾತ್ರ ಹೇಳಲು ನಿರಾಕರಿಸಿದರು. ರಾಮಪುರದ ಬಾಬೂ ರಾಯರ ವತಿಯಿಂದ ಶೇಟಜಿಯ ಕಡೆಗೆ ಕೆಲವು ಸಾಮಾನುಗಳನ್ನು ತೆಗೆದು ಕೊಳ್ಳಲು ಹೋಗಿ ಬರುತ್ತಿದ್ದುದಾಗಿ ಹೇಳಿದರು. ಅವರ ಹೇಳಿಕೆ ವಿಶ್ವಸನೀಯು ವೆಂದು ಕಂಡುಬಂದದ್ದರಿಂದ ಇನ್ಸಪೆಕ್ಟರರು ಅವರಿಗೆ ಹೋಗಲು ಅನುಮತಿ ಕೊಟ್ಟರು. ಆದರೆ ಅವರ ಮೇಲೆ ಕಣ್ಣಿಡಲು ಒಬ್ಬನನ್ನು ನಿಯಮಿಸಲಾಗಿದೆ.

'ಈ ಬಗ್ಗೆ ನನ್ನ ಕಡೆಗೆ ವರದಿ ಬಂದೊಡನೆ ನಾನು ಮೋತೀಬಜಾರಿಗೆ ಹೋದೆ. ಆಗ ಶೋಘರನ ಶವವಿನ್ನೂ ಮೋಟಾರಿನಲ್ಲೇ ಇತ್ತು. ಅದನ್ನು ಹೊರದೆಗೆದು ನಾವು ಒಳಕ್ಕೆ ಸಾಗಿಸಿದೆವು. ಅನಂತರ ಅಲ್ಲಿದ್ದ ಸಾಮಾನೆಲ್ಲ

ವನ್ನೂ ನಾನು ಸೂಕ್ಷ್ಮವಾಗಿ ನಿರೀಕ್ಷಿಸಿದೆ. ಅಲ್ಲಿದ್ದ ವಸ್ತುವೊಂದೂ ಅಸ್ತವ್ಯಸ್ತವಾಗಿರದೆ ಇದ್ದುದು ಇದ್ದಲ್ಲೇ ಇದೆಯೆಂಬುದು ಕಂಡುಬಂದಿತು.'

ಇನ್ಸಪೆಕ್ಟರ್ ಸಾಹೇಬರು ಈ ವಿಚಾರ ಹೇಳುತ್ತಿದ್ದಾಗ ರಾಮರಾಯರು ಏನನ್ನೂ ಮಾತನಾಡಲಿಲ್ಲ. ಈ ಪ್ರಕರಣದ ಮುಂದನೆಯನ್ನು ಚೆನ್ನಾಗಿಯೆ ಮಾಡಿದ್ದರು ಮೋರೆ. ಆದರೆ ರಾಮಪುರದ ಬಾಬೂರಾಯರಿಗೂ ಈ ಪ್ರಕರಣಕ್ಕೂ ಸಂಬಂಧವುಂಟೆಂಬುದು ತಿಳಿದಾಗ ಮಾತ್ರ ರಾಮರಾವ್ ಮತ್ತು ಭಾಲೇರಾಯರಲ್ಲಿ ದೃಷ್ಟಿವಿನಿಮಯ ನಡೆಯಿತು.

ಮೋರೆ ಮುಂದೆ ಹೇಳುತ್ತಿದ್ದರು: 'ನರಜೀವನದಾಸರ ವ್ಯವಹಾರ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿದ್ದಿತಾದರೂ ತೀರಾ ಕಡಿಮೆ ಸಂಖ್ಯೆಯ ವ್ಯವಹಾರಗಳಿಗೆ ಮಾತ್ರ ಅವರು ಕೈಹಾಕುತ್ತಿದ್ದರಾದ್ದರಿಂದ ಅವರಲ್ಲಿ ಒಬ್ಬನೇ ಒಬ್ಬ ಕರಣಿಕನಿದ್ದ. ಆತ ಬಹಳ ಹಿಂದಿನಿಂದಲೂ ಅವರ ಹತ್ತಿರ ಇದ್ದನಾದ್ದರಿಂದ ವಿಶ್ವಾಸಿಕನಾಗಿರುವ ಹಾಗಿದೆ. ಅವನ ಮನೆಯೆಲ್ಲಿದೆಯೆಂಬುದು ನಮಗೆ ತಿಳಿಯಲಿಲ್ಲ. ಈಗ ಅವನನ್ನು ಕಾಣಲು ನಾವು ಮೋತೀಬಜಾರಕ್ಕೆ ಹೋಗಬೇಕಾಗಿದೆ. ಅವನ ಹೇಳಿಕೆ ತುಂಬ ಸ್ವಾರಸ್ಯವಾದುದಾದೀತು. ನೀವೂ ಬರುತ್ತೀರಲ್ಲವೆ ನಮ್ಮ ಜೊತೆಗೆ?'

'ಇಲ್ಲಿ ನೋಡಿ. ನಮ್ಮ ಭಾಲೇರಾಯರಿಗೂ ನೀವು ಬರಗೊಡುವಿರಾದರೆ ನಾನು ಬರುತ್ತೇನೆ.'

'ಅಂದರೆ? ನಿಮ್ಮೊಬ್ಬರನ್ನೇ ನಾನು ಕರೆದೆನೆಂದು ತಿಳಿದಿರೇನು?'

'ಅಚ್ಛಾ! ಭಾಲೇರಾವ್, ಬಟ್ಟೆ ಹಾಕಿಕೊಳ್ಳಿ.'

ಭಾಲೇರಾಯರು ಬಟ್ಟೆ ಹಾಕಿಕೊಂಡು ಬರುವಷ್ಟರಲ್ಲಿ ರಾಮರಾಯರೂ ಸಿದ್ಧರಾಗಿದ್ದರು.

ಮನೆಯಿಂದ ಹೊರಡುವಾಗ ರಾಮರಾಯರೆಂದರು—'ಮೋರೆಸಾಹೇಬ, ಈ ರಾಮಪುರದವರ ಮೇಲೆ ಕಣ್ಣಿಡುವುದಕ್ಕಾಗಿ ನೀವು ಕಳುಹಿಸಿದ ಆಸಾಮಿ ಬುದ್ಧಿವಂತನಾಗಿರುವನಷ್ಟೆ?'

‘ಹೌದು. ಏಕೆ ಕೇಳಿದಿರಿ?’

‘ಇನ್ನು ಹೆಚ್ಚು ಜಾಗರೂಕತೆಯಿಂದಿರಲು ಅವನಿಗೆ ನಿರೋಪ ಕಳುಹಿಸಿರಿ.’

‘ಅದೇನು? ಈ ಅಸಾಮಿಗಳಿಬ್ಬರ ಬಗ್ಗೆ ನಿಮಗೇನಾದರೂ ಗೊತ್ತಿದೆ ಯೆಂದು ತೋರುತ್ತೆ?’

‘ಈ ಅಸಾಮಿಗಳ ಬಗ್ಗೆ ಅಲ್ಲವಾದರೂ ಬಾಬೂರಾಯರ ಬಗ್ಗೆ ಮಾತ್ರ ಸಾಕಷ್ಟು ಗೊತ್ತಿದೆ’

ರಾಮರಾಯರ ಈ ಮಾತು ಕೇಳಿ ಇನ್ಸಪೆಕ್ಟರಿಗೆ ಬಹಳ ಆಶ್ಚರ್ಯ ವಾಯಿತು. ಅವರೆಂದರು ‘ಅಂದರೆ? ಈ ನವಕೋಟಿ ನಾರಾಯಣನ ಮೇಲೆ ನಿಮಗೆ ಸಂಶಯ ಇದೆಯೋ ಹೇಗೆ?’

‘ಇದ್ದರೆ ಆಶ್ಚರ್ಯವೇನು? ಅದು ಹೇಗೂ ಇರಲಿ. ಅಂತೂ ಅವರಿಬ್ಬ ರನ್ನೂ ಎಚ್ಚರಿಕೆಯಿಂದ ನೋಡಿಕೊಳ್ಳಲು ತಿಳಿಸಿರಿ.’

ಇನ್ಸಪೆಕ್ಟರು ಆ ಕಡೆಗೆ ಬರುವಾಗ ಒಬ್ಬ ಪೋಲೀಸನನ್ನು ಜೊತೆಗೆ ಕರೆದು ತಂದಿದ್ದರು. ಆತ ಹಿರಾಮಾಣೀಕ ಮ್ಯಾನ್ಸನ್ನಿನ ಕಡೆಗೆ ತೆರಳುತ್ತಲೂ ಈ ತ್ರಿಮೂರ್ತಿಗಳು ಹೊರಹೊರಟರು.

೬

## ಇನ್ನೂ ಒಂದು ಕೊಲೆ!

ಡಿಟೆಕ್ಟಿವ್ ರಾಮರಾಯರು, ಇನ್ಸಪೆಕ್ಟರ್ ಮೋರೆರಾಯರು ಮತ್ತು ಭಾಲೇರಾಯರು ಮೋತೀಬಜಾರಕ್ಕೆ ಬಂದಾಗ ನರಜೀವನದಾಸರ ಅಂಗಡಿ ಯನ್ನು ತೆರೆದು ಗೋವರ್ಧನ ಹಣೆಗೆ ಕೈ ಇಟ್ಟುಕೊಂಡು ಕುಳಿತಿದ್ದ. ನಿನ್ನೆ ರಾತ್ರಿ ನಡೆದ ಘಟನೆಯ ವಿಚಾರ ಕಿವಿಗೆ ಬಿದ್ದಂದಿನಿಂದ ಆತ ಹುಚ್ಚನಂತಾಗಿ

ಹೋಗಿದ್ದ. ಖೂನಿ ಮಾಡಿದವರಾರಿರಬಹುದೆಂದು ಆತ ತರ್ಕಿಸಿ ನೋಡಲು ಪ್ರಯತ್ನಿಸಿದ. ಆದರೆ ಅವನ ತಲೆಯಲ್ಲಿ ವಿಚಾರಗಳೇ ಬರದಂತಾದುದರಿಂದ ಬಡಪಾಯಿ ಹಣೆಗೆ ಕೈ ಇಟ್ಟುಕೊಂಡು ಕುಳಿತುಬಿಟ್ಟಿದ್ದ. ಆತ ಇನ್ನೇನು ತಾನೆ ಮಾಡಿಯಾನು ?

ಬೆಳಗ್ಗೆ ಆ ಮೂರು ಶವಗಳನ್ನು ತಪಾಸಣೆಗಾಗಿ ಅಲ್ಲಿಂದ ಸಾಗಿಸಲಾಗಿದ್ದಿತು. ಕೊಲೆಗಡಕರು ತಮ್ಮ ಕೆಲಸವನ್ನು ಬಹಳ ಜಾಗರೂಕತೆಯಿಂದ ನೆರವೇರಿಸಿದ್ದರಾದುದರಿಂದ ಆ ಶವಗಳು ಇದ್ದಲ್ಲಿಯೆ ಇದ್ದರೂ ಸಹ ರಾಮರಾಯರಿಗೆ ಅವುಗಳಿಂದ ಯಾವ ಹೊಸ ವಿಚಾರವೂ ತಿಳಿಯಲು ಸಾಧ್ಯವಿರಲಿಲ್ಲ. ಆದರೂ ಈ ಬಗ್ಗೆ ಸರಕಾರೀ ಡಾಕ್ಟರು ಒದಗಿಸುವ ಪುರಾವೆಯಿಂದ ಸಾಧ್ಯವಾದಷ್ಟು ವಿವರಗಳನ್ನು ತಿಳಿದುಕೊಳ್ಳಬೇಕೆಂದು ನಿರ್ಧರಿಸಿ ಅವರು ಅಂಗಡಿಯನ್ನು ಪರೀಕ್ಷಿಸತೊಡಗಿದರು.

ಗೋವರ್ಧನನ ತಪಾಸಣೆಯ ಕಾಲಕ್ಕೆ ತಮಗೆ ಸಾಕಷ್ಟು ವಿವರಗಳು ದೊರೆಯಬಹುದೆಂದು ಅವರ ಭಾವನೆಯಿತ್ತು. ಆದರೆ ಪ್ರತ್ಯಕ್ಷ ವಿಚಾರಣೆಗಾರಂಭವಾದಾಗ ಗೋವರ್ಧನ ತುಂಬ ಹೆದರಿಕೊಂಡ ರಾಮರಾಯರು ಕೇಳಿದ ಪ್ರಶ್ನೆಗಳಿಗೆಲ್ಲ ಆತ ಪರಸ್ಪರ ವಿರೋಧಿ ಉತ್ತರಗಳನ್ನು ಕೊಡತೊಡಗಿದ. ಆದರಿಂದಾಗಿ ಇನ್ಸಪೆಕ್ಟರ್ ಮೋರೆಯವರಿಗೆ ಕೋಪ ಬಂದಿತು. ಅವರು ಅವನನ್ನು ಬೆದರಿಸಿ ಕೇಳಲಾರಂಭಿಸಿದರು. ಆದರಿಂದಾಗಿ ಆತ ಇನ್ನೂ ಹೆದರಿದ. ಥರಥರ ನಡುಗತೊಡಗಿದ. ಆತನ ಅವಸ್ಥೆಯನ್ನು ಕಂಡು ರಾಮರಾಯರು ವಿಚಾರಣೆ ನಿಲ್ಲಿಸಲು ಹೇಳಿದರು. ಅವನ ಮನಸ್ಸು ಸ್ವಲ್ಪ ಪೂರ್ವಸ್ಥಿತಿಗೆ ಬಂದ ಮೇಲೆ ತಾನಾಗಿಯೆ ಆತ ಎಲ್ಲವನ್ನೂ ಹೇಳಬಹುದು, ಮನುಷ್ಯ ವಿಶ್ವಾಸಿಯಂತೆ ತೋರುತ್ತಾನೆ–ಎಂದು ರಾಮರಾಯರು ಅಭಿಪ್ರಾಯಪಟ್ಟದ್ದರಿಂದ ಮೋರೆಯವರು ತಮ್ಮ ಸಿಟ್ಟು ನುಂಗಿಕೊಂಡು ಮೌನ ತಳೆಯಬೇಕಾಯಿತು

ಗೋವರ್ಧನನನ್ನು ಒಳಗಿನ ಕೋಣೆಗೆ ಕರೆದೊಯ್ದು ಸಂತಯಿಸಿದ ತರುವಾಯ ಆತ ಶಾಂತನಾದ. ಆತನಿಗೆ ಧೈರ್ಯ ಬರುವಂತೆ ನಾಲ್ಕಾರು

ಮಾತು ಆಡಿದ ನಂತರ ರಾಮರಾಯರು ಅವನಿಂದ ಎಲ್ಲ ವಿಚಾರಗಳನ್ನೂ ಹೊರಗೆಡವಿದರು.

' ಇಲ್ಲಿ ನೋಡಿ, ಗೋವರ್ಧನ, ನರಜೀವನ ಶೇಟಜಿಯವರ ಆಕಸ್ಮಿಕ ಕೊಲೆಯಿಂದಾಗಿ ನಿಮಗೆ ಬಲವಾದ ಆಘಾತವಾಗಿದೆಯೆಂಬುದು ಸ್ಪಷ್ಟವಾಗಿದೆ. ಆದದ್ದು ಆಗಿಹೋಯ್ತು. ಈಗ ನೀವು ವಿವೇಕ ತಂದುಕೊಳ್ಳುವುದೊಳ್ಳೆಯದು. ನೀವೇ ಹೀಗೆ ಹಣೆಗೆ ಕೈ ಇಟ್ಟುಕೊಂಡು ಕುಳಿತುಬಿಟ್ಟರೆ ನಾವು ಅಪರಾಧಿಗಳನ್ನು ಹೇಗೆ ಹಿಡಿಯಬೇಕು? ನಿಜವಾಗಿ ನೋಡಿದರೆ ನೀವು ಈ ಕೆಲಸದಲ್ಲಿ ಮುಂದಾಗಿ ಆಕಾಶ ಪಾತಾಳಗಳನ್ನೊಂದು ಮಾಡಬೇಕು. ಪ್ರತಿಯೊಬ್ಬ ಮನುಷ್ಯನಲ್ಲಿ ಅಂಥ ಸಾಹಸವಿದ್ದೇ ಇರುವುದೆಂದೇನೂ ಅಲ್ಲ. ಆದರೆ ನಿಮಗೆ ಗೊತ್ತಿರುವ ವಿಷಯಗಳನ್ನಾದರೂ ನೀವು ಒಂದನ್ನೂ ಬಿಡದೆ ನಮಗೆ ಹೇಳಬೇಕು.'

' ನನಗೆ ಗೊತ್ತಿದ್ದುದನ್ನೆಲ್ಲ ಹೇಳ್ತೀನೆ ಸಾಹೇಬರೆ. ಇದು ವರೆಗೆ ನನ್ನ ಮನಸ್ಸು ನನ್ನ ಅಂಕಿತದಲ್ಲಿರಲಿಲ್ಲ. ನನ್ನ ಕರ್ತವ್ಯವನ್ನು ನಾನು ಮರೆತುಬಿಟ್ಟಿದ್ದೆ. ದಯುವಿಟ್ಟು ಕ್ಷಮಿಸಿ' ಎಂದು ಹೇಳಿದ ಗೋವರ್ಧನ.

' ಅಚ್ಛಾ. ನಿನ್ನೆ ರಾತ್ರಿ ಶೇಟಜಿ ಯಾರನ್ನಾದರೂ ಭೆಟ್ಟಿಯಾಗುವವರಿದ್ದರೇನು?'

' ಹೌದು ಸಾಹೇಬ್. ರಾತ್ರಿ ಒಂಬತ್ತು ಗಂಟೆಗೆ ಯಾರೋ ಅಂಗಡಿಗೆ ಬರುವರೆಂದು ಶೇಟಜಿ ಹೇಳುತ್ತಿದ್ದರು.'

' ಸರಿ. ಈ ಜನ ಯಾರು ಎಂಬುದರ ಬಗ್ಗೆ ನಿಮಗೇನಾದರೂ ತಿಳಿದಿದೆಯೆ?'

' ಹಿರಾಸಿಂಗ ಸ ೀಸಿಟರಿಗೆ ಫೋನ್ ಮಾಡಿ ಭೆಟ್ಟಿಯ ಸಮಯವನ್ನು ತಕ್ಷಣ ಗೊತ್ತುಮಾಡಲು ಶೇಟಜಿ ನನಗೆ ಹೇಳಿದ್ದರು. ಅನಂತರ ಅವರನ್ನು ಕಾಣುವುದಕ್ಕಾಗಿ ಅವರೊಬ್ಬರೇ ಹೋದರು.'

‘ ಸಾಲಿಸಿಟರ ಕಡೆಗೆ ಶೇಟಜಿ ಏತಕ್ಕಾಗಿ ಹೋಗಿದ್ದರೆಂಬುದು ನಿಮಗೆ ಗೊತ್ತಿದೆಯೆ ? ’

‘ ಇಲ್ಲ. ’

‘ ನಿನ್ನೆಯ ದಿನ ಶೇಟಜಿಯವರನ್ನು ಭೆಟ್ಟಿಯಾಗಲು ಯಾರು ಯಾರು ಬಂದಿದ್ದರೆಂಬುದು ನಿಮಗೆ ನೆನಪಿದೆಯೆ ? ’

‘ ಬೆಳಗ್ಗೆ ಮೂರು ನಾಲ್ಕು ಜನ ವ್ಯಾಪಾರಿಗಳು ಬಂದಿದ್ದರು. ಮಧ್ಯಾಹ್ನ ಇಬ್ಬರು ಅಪರಿಚಿತ ವ್ಯಕ್ತಿಗಳೂ ಬಂದಿದ್ದರು.’

‘ ಹಿರಾಸಿಂಗರಿಗೆ ಫೋನ್ ಮಾಡುವುದಕ್ಕೆ ಮೊದಲು ಈ ಭೇಟಿ ನಡೆದವೊ? ಅಥವಾ ಆ ಮೇಲೋ ? ’

‘ ಮೊದಲು. ’

‘ ಸರಿ. ಈ ಭೆಟ್ಟಿಯ ಬಗ್ಗೆ ನಿಮಗೆ ಏನೇನು ಗೊತ್ತಿದೆ ? ’

‘ ಬೆಳಗ್ಗೆ ಒಬ್ಬ ಹುಡುಗ ಖಾಸಗಿ ಪತ್ರವೊಂದನ್ನು ತೆಗೆದುಕೊಂಡು ಇಲ್ಲಿಗೆ ಬಂದ. ಅದರ ಮೇಲೆ ‘ ಪೂರ್ಣ ಖಾಸಗಿ ’ ಎಂದು ಬರೆದಿದ್ದಿತಾದ್ದರಿಂದ ನಾನು ಅದನ್ನು ತಕ್ಷಣ ಶೇಟಜಿಗೆ ಕೊಟ್ಟೆ. ಸುಮಾರು ಇಪ್ಪತ್ತು ಮಿನಿಟುಗಳ ತರುವಾಯ ಶೇಟಜಿಯವರು ಕೊಟ್ಟ ಉತ್ತರದ ಲಕೋಟೆ ತೆಗೆದುಕೊಂಡು ಆ ಹುಡುಗ ಹೊರಟುಹೋದ. ಈ ಅಂಗಡಿಯಲ್ಲಿ ಬಲು ದಿನಗಳಿಂದ ನಾನೊಬ್ಬನೇ ಕಾರಕೂನನಾಗಿರುವುದರಿಂದ ಇಲ್ಲಿಂದ ಹೋಗುವ ಪ್ರತಿಯೊಂದು ಪತ್ರದ ಮೇಲೂ ದೃಷ್ಟಿ ಬೀಳುವ ಅಭ್ಯಾಸ ಬಿದ್ದುಬಿಟ್ಟಿದೆ ನನಗೆ. ಅಂತೆಯೆ ಈ ಪತ್ರದ ಮೇಲಿನ ವಿಳಾಸವನ್ನು ನಾನು ಓದಿ ನೋಡಿದೆ.’

‘ ಅಚ್ಛಾ. ಆ ವಿಳಾಸ ನಿಮ್ಮ ನೆನಪಿನಲ್ಲಿರಬೇಕು ? ’

‘ ಹೌದು. ಅದರ ಮೇಲೆ ಪದ್ಮಾಕರ ಪಾಟೀಲ, ಹಿರಾಮಾಣೀಕ ಮ್ಯಾನ್ಷನ್, ಎಂಬ ವಿಳಾಸ ಬರೆದಿದ್ದ ಹಾಗೆ ನನಗೆ ಚೆನ್ನಾಗಿ ನೆನಪಿದೆ.’

‘ ಆಮೇಲೆ ? ’

‘ ಮಧ್ಯಾಹ್ನ ಅದೇ ವ್ಯಕ್ತಿ ಇನ್ನೊಬ್ಬನೊಂದಿಗೆ ಶೇಟಜಿಯನ್ನು ಕಾಣಲು ಬಂದ. ಆತ ತನ್ನ ಹಸರಿನ ಚೀಟಿಯನ್ನು ನನ್ನ ಕೈಗೆ ಕೊಟ್ಟಿದ್ದನ್ನು ನಾನೋದಿದ್ದೆ. ಅವರಿಬ್ಬರೂ ಹೋದ ಬಳಿಕ ಶೇಟಜಿ ಹೀರಾಸಿಂಗರಿಗೆ ಫೋನ್ ಮಾಡಿದರು.’

‘ ಶಾಬ್ಬಾಸ್ ! ಅತಿ ಮಹತ್ವದ ಸಂಗತಿಗಳನ್ನು ತಿಳಿಸುತ್ತ ಇದ್ದೀರಿ ಈ ಇಬ್ಬರು ವ್ಯಕ್ತಿಗಳೂ ಅಪ್-ಟು-ಡೇಟ್ ಡ್ರೆಸ್ ಮಾಡಿದ್ದರಲ್ಲವೆ ? ’

‘ ಹೌದು. ’

‘ ಕನ್ನಡಕ ಹಾಕಿದ್ದರೇನು ? ’

‘ ಇಲ್ಲ.’

‘ ಸರಿ. ಪಾಟೀಲರಿಂದ ಶೇಟಜಿಗೆ ಬಂದಿದ್ದ ಆ ಕಾಗದವನ್ನು ನನಗೆ ತೋರಿಸುತ್ತೀರಾ? ಅದು ಸಿಕ್ಕಬಹುದೇ ಈಗ ? ’

‘ ಖಂಡಿತ ಸಿಕ್ಕೀತು ಎನ್ನಲಾರೆ. ಏಕೆಂದರೆ ಶೇಟಜಿಯವರ ಖಾಸಗೀ ಪತ್ರವ್ಯವಹಾರವನ್ನು ನಾನೆಂದೂ ಮುಟ್ಟಿಲ್ಲ. ಅವರ ಮೇಜಿನ ಒಂದು ಅಂಕಣದಲ್ಲಿ ಇಂಥ ಪತ್ರಗಳಿರಬಹುದೆಂದು ನನ್ನ ಕಲ್ಪನೆ. ಅಥವಾ ಅವರು ಆ ಪತ್ರವನ್ನು ಹರಿದು ಹಾಕಿದ್ದರೂ ಹಾಕಿದ್ದಾರು.’

ಆದರೂ ಒಮ್ಮೆ ಆ ಅಂಕಣದಲ್ಲಿ ಹುಡುಕಿ ನೋಡಿ. ಸಿಕ್ಕಿದರೂ ಸಿಕ್ಕೀತು. ’

ಗೋವರ್ಧನ ಆ ಅಂಕಣವನ್ನು ತೆರೆದಾಗ ಶೇಟಜಿ ಅಲ್ಲಿ ವ್ಯವಸ್ಥಿತವಾಗಿ ಇರಿಸಿದ ಪತ್ರಗಳ ಚೀಲಗಳನ್ನು ಕಂಡು ರಾಮರಾಯರಿಗೆ ಆಶ್ಚರ್ಯವಾಗದಿರಲಿಲ್ಲ. ‘ ಪಿ ’ ಎಂಬ ಅಕ್ಷರದ ಚೀಲವನ್ನು ತೆಗೆದು ಅದರಲ್ಲಿ ಆ ಪತ್ರ ಸಿಕ್ಕುವುದಿಲ್ಲವೆಂದು ಗೋವರ್ಧನ ಹೇಳಿದಾಗ ಇನ್ಸಪೆಕ್ಟರರಿಗೆ ಅತೀವ ನಿರಾಶೆಯಾಗದಿರಲಿಲ್ಲ. ಅಷ್ಟರಲ್ಲಿ ರಾಮರಾಯರು—‘ ಗೋವರ್ಧನ, ಆ ಪತ್ರ ‘ ಬಿ ’ ಅಕ್ಷರದ ಚೀಲದಲ್ಲಿರಬೇಕು ನೋಡಿರಿ ’ ಎಂದರು.

ಗೊಂದಲಕ್ಕೆ ಸಿಕ್ಕಿಬಿದ್ದ ಗೋವರ್ಧನ 'ಬಿ' ಅಕ್ಷರದ ಚೀಲ ತೆಗೆದು ಅದರೊಳಗಿನ ಪತ್ರಗಳನ್ನು ನೋಡತೊಡಗಿದ. ಕೊಂಚ ಕಾಲದಲ್ಲಿ ಪದ್ಮಾಕರನ ಪತ್ರ ಅವನಿಗೆ ಸಿಂಡುಬಂದಿತು. ಪತ್ರವನ್ನೋದಿದ ತರುವಾಯ ಅದನ್ನಾತ ಇನ್ಸಪೆಕ್ಟರ ಕೈಗೆ ಕೊಟ್ಟ. ಅವರು ಅದನ್ನೋದಿ ನೋಡುತ್ತಿದ್ದಾಗ ರಾಮರಾಯರ ದೃಷ್ಟಿ ಕೋಣೆಯಲ್ಲೆಲ್ಲ ಸುತ್ತಾಡುತ್ತಿತ್ತು. ಅಲ್ಲಿ ಅವರಿಗೆ ಏನು ಕಾಣಿಸಿತೋ ಏನೊ, ತ್ವರೆಯಿಂದ ಅವರೊಂದು ಮೂಲೆಗೆ ಹೋಗಿ ಅಲ್ಲಿ ಬಿದ್ದಿದ್ದ ಕೆಲವು ತುಂಡುಗಳನ್ನೆತ್ತಿ ತಮ್ಮ ಜೇಬಿಗೆ ಬಿಟ್ಟರು. ಮೇಜಿನ ಮೇಲೆ ಕಟ್ಟಿಗೆಯ ತುಂಡುಗಳೂ ಕೆಲವು ಕಾಣಿಸಿದವು. ಅವುಗಳನ್ನು ಅವರು ಎತ್ತಿ ಜೇಬಿಗೆ ಹಾಕಿದರು

'ಏನ್ರಿ. ಏನು ಸಿಕ್ಕಿತು?' ಎಂದರು ಇನ್ಸಪೆಕ್ಟರು.

'ಏನೂ ಇಲ್ಲ. ಆಮೇಲೆ ಹೇಳ್ತೇನೆ. ಈಗ ನಾವು ಹೀರಾಸಿಂಗರ ಆಫೀಸಿಗೆ ಹೋಗೋಣ. ಆಮೇಲೆ ಪದ್ಮಾಕರ ಪಾಟೀಲರನ್ನು ಕಾಣೋಣ. ಹೀರಾಸಿಂಗರ ಮ್ಯಾನೇಜರರಿಂದ ಏನಾದರೂ [illegible]ಯಬಹುದೆಂದು ನನಗೆನ್ನಿಸುತ್ತೆ.'

ಹತ್ತುಹದಿನೈದು ನಿಮಿಷಗಳಲ್ಲಿ ಅವರು ಕೋಟೆಯಲ್ಲಿನ ಸಾಲಿಸಿಟರ್ ಬೀದಿಗೆ ಬಂದರು. ಹೀರಾಸಿಂಗರ ಕಚೇರಿ ಬಹಳ ದಿನಗಳಿಂದ ಅಲ್ಲಿದ್ದಿತು. ಅಲ್ಲಿ ಕೆಲಸವೂ ವಿಪರೀತವಾಗಿರುತ್ತಿತ್ತು. ಪ್ರತಿಯೊಂದು ಕೆಲಸಕ್ಕೂ ಬೇರೆ ಬೇರೆ ಜನರನ್ನು ನಿಯಮಿಸಿದ್ದುದರಿಂದ ಎಲ್ಲವೂ ಯಂತ್ರದಂತೆ ಸುರಳೀತವಾಗಿ ನಡೆಯುತ್ತಿದ್ದವು. ಆದರೆ ಮುನ್ನಾದಿನ ರಾತ್ರಿ ಅಕಸ್ಮಾತ್ತಾಗಿ ಸಾಲಿಸಿಟರ್ ಸಾಹೇಬರ ಕೊಲೆಯಾಗಿ ಹೋಗಿದ್ದುದರಿಂದ ಅವರ ಆಫೀಸಿನಲ್ಲಿ ಗೊಂದಲವೆದ್ದಿದ್ದಿತು. ಸಂಸ್ಥಾನದಿಂದ ಅವರ ಕಡೆಗೆ ಮುತ್ತುರತ್ನದ ಒಡವೆಗಳು ಕಳುಹಿಸಲ್ಪಟ್ಟಿವೆಯೆಂಬ ಸಮಾಚಾರ ಪ್ರಸಿದ್ಧವಾಗಿರಲಿಲ್ಲವಾದರೂ ಅವರ ತಿಜೋರಿಯ ಎದುರಿಗೆ ಪಹರೆ ಮಾಡಲು ಮಹಾರಾಜರಿಂದ ಕಳುಹಿಸಲ್ಪಟ್ಟ ಶಿಪಾಯಿ ಕಚೇರಿಯ ಬಾಗಿಲಲ್ಲಿ ನಿಂತುಕೊಂಡಿದ್ದ. ಸಾಲಿಸಿಟರ್ ಸಾಹೇಬರು ರತ್ನಗೋಲವನ್ನು ಶೇಟಜಿಯ ಅಂಗಡಿಗೊಯ್ಯುವಾಗ ಈ ಶಿಪಾಯಿ ಪಹರೆಯ ಮೇಲಿರಲಿಲ್ಲ. ಇಂದು ಬೆಳಗಿನಿಂದ ಆತ ಅಲ್ಲಿ ಕಾವಲು ನಡೆಸಿದ್ದ.

ನರಜೀವನದಾಸರಿಗೆ ತೋರಿಸುವುದಕ್ಕಾಗಿ ಹೀರಾಸಿಂಗರು ಕೆಲವು ರತ್ನ ಗಳನ್ನೊಯ್ದಿರಬೇಕೆಂದು ರಾಮರಾಯರು ತರ್ಕಿಸಿದ್ದರು. ಈ ವಿಚಾರ ಅವರ ಮ್ಯಾನೇಜರರನ್ನುಳಿದು ಇನ್ನಾರಿಗೂ ಗೊತ್ತಿರುವುದು ಅಸಾಧ್ಯವಾಗಿತ್ತು. ಮುನ್ನಾ ದಿನ ರಾತ್ರಿ ನಡೆದ ಮೂರು ಕೊಲೆಗಳು ಈ ರತ್ನಗಳಿಗಾಗಿಯೆ ನಡೆದಿರಬೇಕೆಂದು ರಾಮರಾಯರಿಗೆನ್ನಿಸುತ್ತಿತ್ತು. ಹೀರಾಸಿಂಗ ಮತ್ತು ನರಜೀವನದಾಸರು ಆ ರತ್ನಗಳನ್ನು ನೋಡುತ್ತಿರುವ ಸಮಯದಲ್ಲಿ ಅವರ ಮೇಲೆ ದಾಳಿ ನಡೆದಿರಬೇಕೆಂದು ಅವರಿಗೆ ಅನುಮಾನವಿತ್ತು. ಮೋತೀ ಬಜಾರಿಗೆ ಹೋಗುವಾಗ ಹೀರಾಸಿಂಗರು ತಮ್ಮ ಜೊತೆಗೆ ಯಾವ ಯಾವ ಸಾಮಾನು ತೆಗೆದುಕೊಂಡು ಹೋಗಿದ್ದರೆಂಬುದು ತಿಳಿದುಬಂದಿದ್ದರೆ ಮುಂದಿನ ತರ್ಕ ಹೂಡಲು ಸುಲಭವಾಗುತ್ತಿತ್ತು. ಅಂತೆಯೆ ಅವರು ಸಾಲಿಸಿಟರ ಕಚೇರಿಗೆ ಬಂದಿದ್ದರು.

ಮೊದಲನೆಯ ಅಂತಸ್ತಿನ ಮೇಲಿನ ಕಚೇರಿಯ ಬಾಗಿಲಲ್ಲಿ ತರುಣ ನೊಬ್ಬ ಅಂದಿನ 'ಟೈಮ್ಸ್' ಪತ್ರಿಕೆಯನ್ನೋದುತ್ತ ಕುಳಿತುಕೊಂಡಿದ್ದ. ರಾಮರಾಯರು ತಮ್ಮ ಸಂಗಡಿಗರೊಂದಿಗೆ ಬರುತ್ತಲೂ ಆತ ಪತ್ರಿಕೆಯನ್ನು ಬದಿಗಿರಿಸಿ ಇಂದು ಕಚೇರಿ ಮುಚ್ಚಲಾಗಿದೆಯೆಂಬ ಸುದ್ದಿಯನ್ನು ಅವರಿಗೆ ತಿಳಿಸಿದ.

'ಸಾಲಿಸಿಟರ್ ಸಾಹೇಬರ ಮ್ಯಾನೇಜರು ಆಫೀಸನಲ್ಲಿದ್ದಾರಷ್ಟೆ?'

'ಇದ್ದಾರೆ. ಆದರೆ—'

'ಗುಪ್ತಪೋಲೀಸ್ ಖಾತೆಯ ಇನ್ಸಪೆಕ್ಟರ ಮೋರೆ ನಿಮ್ಮನ್ನು ಕಾಣಲು ಬಂದಿರುವರೆಂದು ಅವರಿಗೆ ತಿಳಿಸಿ.'

'ನೀವು ಕೊಂಚ ಹೊತ್ತು ತಡೆಯಬೇಕಾಗುವುದು. ಏಕೆಂದರೆ ಅವ ರೀಗ ಕೆಲಸದಲ್ಲಿದ್ದಾರೆ. ಅವರನ್ನು ಕಾಣಲು ಬಂದಿದ್ದ ಇಬ್ಬರನ್ನು ಇದೇಈಗ ಒಳಕ್ಕೆ ಕಳುಹಿಸಿ ಬಂದೆ.'

'ಬಂದವರಾರೆಂಬುದನ್ನು ನೀವು ಬಲ್ಲಿರಿ?' ಎಂದು ಕೇಳಿದರು. ರಾಮ ರಾಯರು.

'ಅವರ ನನ್ನ ಪರಿಚಯ್ವೇನೂ ಇಲ್ಲ. ಆದರೆ ಅವರಿಬ್ಬರೂ ಬಂಗಾಲೀ ಫ್ಯಾಶನ್ನಿನ ಬಟ್ಟೆ ಹಾಕಿಕೊಂಡಿದ್ದಾರೆ. ಮುಂಬಯಿಗೆ ಇಂದು ಬೆಳಗ್ಗೆ ಅವರು ಬಂದರಂತೆ. ಶೇಟರ ಸುದ್ದಿಯನ್ನು ಓದಿದರಂತೆ. ತಕ್ಷಣ ನಮ್ಮ ಮ್ಯಾನೇಜರರನ್ನು ಕಾಣಲು ಬಂದರಂತೆ.'

ಆ ತರುಣ ಹೇಳಿದ ಸುದ್ದಿಯನೆಲ್ಲ ಕೇಳಿ ರಾಮರಾಯರು ಮೋರೆಯವರಿಗೆ ಏನೋ ಸನ್ನೆ ಮಾಡಿದರು.

'ಇಲ್ಲಿ ನೋಡಿ, ವ್ಯರ್ಥವಾಗಿ ಹೊತ್ತು ಕಳೆಯಲು ನಮಗೆ ಬಿಡುವಿಲ್ಲ. ಈಗ ಬಂದಿರುವ ಈ ಬಂಗಾಲಿಗರ ಕೆಲಸವೆಷ್ಟೇ ಮಹತ್ವದ್ದಾಗಿದ್ದರೂ ನಾವು ಇಲ್ಲಿಗೆ ಬಂದಿರತಕ್ಕ ಕೆಲಸ ಅದಕ್ಕೂ ಮಹತ್ವದ್ದಾಗಿದೆ. ನಮ್ಮ ಹೆಸರುಗಳನ್ನು ನಿಮ್ಮ ಮ್ಯಾನೇಜರಿಗೆ ತಿಳಿಸಿರಿ. ತಕ್ಷಣ ನಮ್ಮನ್ನವರು ಭೆಟ್ಟಿಗೆ ಕರೆಯಿಸುವರು. ಅವರಿಗೆ ಹೋಗಿ ಹೇಳಿಬಿಡಿ. ನಿಮ್ಮ ಮೇಲೆ ಅವರೇನೂ ಸಿಟ್ಟುಮಾಡಲಾರರು.'

ರಾಮರಾಯರ ಈ ನಿರೂಪ ಕೇಳುತ್ತಲೂ ಆ ತರುಣ ಒಳಗಡೆ ಹೊರಟ, ಒಂದೆರಡು ಹೆಜ್ಜೆ ಇಟ್ಟಿರಲಿಲ್ಲ—ಅಷ್ಟರಲ್ಲೇ ಪಿಸ್ತೂಲಿನ ಸದ್ದು ಕೇಳಿಸಿದುದರಿಂದ ಆತ ತಟ್ಟನೆ ನಿಂತುಕೊಂಡ. ಹೊರಗಡೆ ನಿಂತಿದ್ದ ತ್ರಿಮೂರ್ತಿಗಳಿಗೂ ಆ ಸದ್ದು ಕೇಳಿಸಿತು. ಭೆಟ್ಟಿಯ ಅಪ್ಪಣೆ ಬರುತನಕ ಕಾಯಲು ಅವಕಾಶವಿರಲಿಲ್ಲವಾದ್ದರಿಂದ ಅವರು ಒಮ್ಮೆಲೆ ಮುಂದೆ ನಡೆದರು.

ಅವರೆಲ್ಲರೂ ಮ್ಯಾನೇಜರರ ಕೋಣೆಗೆ ಬಂದಾಗ ಅಲ್ಲಿ ಯಾರೂ ಇರಲಿಲ್ಲ. ಅಲ್ಲಿ ಕುಳಿತುಕೊಂಡು ಆಫೀಸಿನ ವ್ಯವಸ್ಥೆ ನೋಡಿಕೊಳ್ಳುತ್ತಿದ್ದ ಆ ವ್ಯಕ್ತಿ ಆಗಲೇ ಗತಪ್ರಾಣವಾಗಿತ್ತು. ಅವನ ಶವ ಮೇಜಿನ ಬಳಿ ನೆಲದಮೇಲೆ ಬಿದ್ದುಕೊಂಡಿತ್ತು. ಹಣೆಯ ಮೇಲಾದ ಗಾಯದಿಂದ ರಕ್ತ ಬಳಬಳನೆ ಸುರಿಯುತ್ತಿತ್ತು. ಅವನು ಕೂಡುವ ಕುರ್ಚಿಯೂ ಶವದ ಹತ್ತಿರ ಅಡ್ಡವಾಗಿ ಬಿದ್ದುಕೊಂಡಿತ್ತು. ಆ ಬಂಗಾಲೀ ಆಸಾಮಿಗಳೊಂದಿಗೆ ಆತ ಮಾತನಾಡುತಿದ್ದಾಗ ಅವರಲ್ಲೊಬ್ಬ ಆತನ ಕೊಲೆ ಮಾಡಿರಬೇಕೆಂದು ರಾಮರಾವ್ ತರ್ಕಿಸಿದರು. ಅವನ ಮೇಜಿನ ಮೇಲಿದ್ದ ಕಾಗದಪತ್ರಗಳೆಲ್ಲ ಸೂರೆಯಾಗಿ ಕೋಣೆ

ಯಲ್ಲೆಲ್ಲ ಬಿದ್ದಿದ್ದವು. ಕಚೇರಿಯ ಕೆಲಸಕಾರ್ಯಗಳ ಕಾಗದಪತ್ರಗಳನ್ನೆಲ್ಲ ವ್ಯವಸ್ಥಿತವಾಗಿ ಕಪಾಟುಗಳಲ್ಲಿಹಾಕಿ ಬೀಗ ಹಾಕುವುದು ಹೀರಾಸಿಂಗರ ಪದ್ಧತಿ ಯಾಗಿದ್ದುದರಿಂದ ಕಪಾಟುಗಳಿಗೆ ಮಾತ್ರ ಯಾರೂ ಕೈ ಹಚ್ಚಿರಲಿಲ್ಲ.

ನೆಲದಮೇಲೆ ಬಿದ್ದಿದ್ದ ಶವದಕಡೆ ಬೆರಳು ಮಾಡಿ ರಾಮರಾಯರು ಕೇಳಿದರು : 'ಏನ್ರಿ, ಇವರೆ ಏನು ನಿಮ್ಮ ಮ್ಯಾನೇಜರು ?'

ಗಾಬರಿಗೊಂಡ ಆ ತರುಣ 'ಹೌದು ಸಾಹೇಬ್' ಎಂದು ಉತ್ತರವಿತ್ತ

ಕೆಳಗೆ ಬಾಗಿ ಇನ್ಸ್‌ಪೆಕ್ಟರ್ ಸಾಹೇಬರು ಆ ಶವವನ್ನು ಪರೀಕ್ಷಿಸು ತ್ತಿದ್ದ ಹಾಗೆ ರಾಮರಾಯರ ದೃಷ್ಟಿ ಕೊಟಡಿಯಲ್ಲೆಲ್ಲ ಸುತ್ತಾಡಿತು. ಅಷ್ಟರಲ್ಲಿ ಹಿಂಭಾಗದಲ್ಲಿದ್ದ ಒಂದು ಬಾಗಿಲಮೇಲೆ ಅವರ ದೃಷ್ಟಿಹೊರಳಿದಾಗ 'ಹಿಂದಿನ ಬಾಗಿಲಿನಿಂದ ಕೆಳಕ್ಕಿಳಿಯುವ ಮೆಟ್ಟಲು ಇದೆಯೇನು ಅಲ್ಲಿ ?' ಎಂದು ಕೇಳಿದರು.

" ಹೌದು ಸಾಹೇಬ್ "

ಒಡನೆಯೆ ರಾಮರಾಯರು ಬಿಟ್ಟ ಬಾಣದಂತೆ ಆ ಬಾಗಿಲಕಡೆ ಧಾವಿ ಸಿದರು. ಬಾಗಿಲು ತೆರೆದು ಅವರು ಭಾಲೇರಾಯರ ಜೊತೆಗೆ ಧಡಧಡನೆ ಮೆಟ್ಟಲು ಇಳಿದು ಕೆಳಕ್ಕೆ ಬಂದರು. ಆದರೆ ಅಲ್ಲಿ ಯಾರ ಸುಳಿವೂ ಕಾಣಿಸ ಲಿಲ್ಲ. ಹೀರಾಸಿಂಗರ ಬಾಗಿಲು ಕಾಯುವ ಆಳು ಅಲ್ಲಿ ಕುಳಿತಿದ್ದ. ರಾಮ ರಾಯರು ಅವನನ್ನು ಕುರಿತು:

" ಭಯ್ಯಾಜಿ, ಇದೇ ಈಗ ಇಲ್ಲಿಂದ ಇಬ್ಬರು ಆಸಾಮಿಗಳು ಹೋದ ರೇನು ? " ಎಂದರು.

' ಹಾದು. ಸಾಹೇಬ್ '

' ಮೋಟಾರಿನಲ್ಲಿ ಕುಳಿತು ಹೋದರೇನು ಅವರು ? '

' ಹೌದು ಸಾಹೇಬ್ '

' ಮೋಟಾರು ಯಾವ ಬಣ್ಣದ್ದಿತ್ತು ? '

' ಕೆಂಪು ಬಣ್ಣದ್ದು, ಸಾಹೇಬ್ '

ಮಹಾದ್ವಾರದಿಂದ ರಾಮರಾಯರು ಹೊರಗೆ ಬಂದು ನೋಡಿದಾಗ ದೂರ ರಸ್ತೆಯಲ್ಲಿ ಎಷ್ಟೋ ಮೋಟಾರು ಗಾಡಿಗಳು ಓಡಾಡುತ್ತಿದ್ದುದು ಕಾಣಿಸಿತು. ಅವುಗಳಲ್ಲಿ ಮೂರುನಾಲ್ಕು ಕೆಂಪು ಬಣ್ಣದ ಗಾಡಿಗಳೂ ಇದ್ದವು. ರತ್ನಗಳನ್ನು ಹಾರಿಸುವುದಕ್ಕಾಗಿ ಮುನ್ನಾದಿನ ರಾತ್ರಿ ಮೂರು ಕೊಲೆ ನಡೆದವೆಂಬುದು ತಿಳಿದಾಗಿನಿಂದ ಅವರ ಮನಸ್ಸು ತೀವ್ರಗತಿಯಿಂದ ವಿಚಾರ ಮಾಡುತ್ತಿತ್ತು. ನಿನ್ನೆ ನಡೆದ ಕೊಲೆಗಳ ಹಿಂದೆ ಒಂದು ಉದ್ದೇಶವಾದರೂ ಇತ್ತು. ಆದರೆ ಇಂದು ಹೀರಾಸಿಂಗರ ಮ್ಯಾನೇಜರರ ಕೊಲೆಯನ್ನು ಮಾಡುವಲ್ಲಿ ಈ ಇಬ್ಬರು ಬಂಗಾಲಿಗಳ ಉದ್ದೇಶವೇನಿದ್ದಿತೆಂಬುದು ಅವರಿಗೆ ಹೊಳೆಯಲಿಲ್ಲ. ರಾಮಪುರದ ಬಾಬೂರಾಯರಿಂದ ಕಳುಹಿಸಲ್ಪಟ್ಟ ಇಬ್ಬರು ಆಸಾಮಿಗಳು ಶೇಟಜಿಯನ್ನು ಕಾಣಲು ಬಂದಾಗ ನರಜೀವನ ಹಾಗೂ ಹೀರಾಸಿಂಗರ ಕೊಲೆಯಾಯಿತೆಂಬುದು ತಿಳಿದಾಗ ಈ ಪ್ರಕರಣದಲ್ಲಿ ಬಾಬೂರಾಯರ ಸಂಬಂಧವಿರಬೇಕೆಂದು ಅವರಿಗೆನ್ನಿಸುತ್ತಿತ್ತು. ಆ ಸಂಬಂಧವನ್ನು ಆಧಾರ ಸಹಿತವಾಗಿ ಸಿದ್ಧಗೊಳಿಸಿ ಅಪರಾಧಿಗಳನ್ನು ಶೋಧಿಸುವ ಕೆಲಸ ರಾಮರಾಯರ ಮುಂದೆ ಉಳಿದಿತ್ತು.

ಇಂದು ನಡೆದ ಇನ್ನೊಂದು ಕೊಲೆಯಿಂದಲಂತೂ ರಾಮರಾಯರು ಇನ್ನೂ ಉದ್ರೇಕಿತರಾಗಿದ್ದರು. ಕೊಂಚ ಕಾಲ ಯೋಚಿಸಿದ ತರುವಾಯ ಅವರು ಹೀರಾಮಾಣೇಕ ಮ್ಯಾನ್ಸನ್‌ದಲ್ಲಿನ ಇಬ್ಬರು ವ್ಯಕ್ತಿಗಳನ್ನು ಕಾಣಲು ನಿರ್ಧರಿಸಿದರು. ಭಾಲೇರಾವ್ ಹಾಗೂ ಮೋರೆಯವರ ಜೊತೆಗೆ ಆ ಕಡೆಗೆ ಹೊರಟರು.

ಈ ಇಬ್ಬರು ವ್ಯಕ್ತಿಗಳಿಗೂ ಕೊಲೆಗಳಿಗೂ ಪ್ರತ್ಯಕ್ಷ ಸಂಬಂಧವಿರಬಹುದೆಂದು ರಾಮರಾಯರಿಗೆನ್ನಿಸುತ್ತಿರಲಿಲ್ಲ. ಅಪರಾಧಿಗಳಿಗೆ ಅನುಕೂಲವಾದ ಸಮಯ ಸನ್ನಿವೇಶಗಳು ದೊರೆಯಲೆಂದೂ, ಪೋಲೀಸರ ಕಣ್ಣಿಗೆ ಧೂಳು ಎರಚಲೆಂದೂ ಬಾಬೂರಾಯರು ಅವರನ್ನು ಮುಂಬಯಿಗೆ ಕಳುಹಿಸಿರಬೇಕೆಂದು ಅವರಿಗೆನ್ನಿಸಿತು. ಆದರೂ ಅವರಿಬ್ಬರಿಗೆ ಅಪರಾಧದ ವಿಚಾರ

ಗೊತ್ತಿರಬೇಕು, ಅಪರಾಧಿಗಳಾರಾರೆಂಬುದೂ ತಿಳಿದಿರಬೇಕು ಎಂದು ಅವರ ತಿಳಿವಳಿಕೆಯಿತ್ತು.

ಹಿರಾಮಣೇಕ ಮ್ಯಾನ್ಸನ್‌ನ ಹತ್ತಿರ ಮೋಟಾರು ಬರುತ್ತಲೂ ಅಲ್ಲಿ ಪಹರೆ ಮಾಡುತ್ತಿದ್ದ ಪೋಲೀಸು ಸಿಪಾಯಿಗಳನ್ನು ಕರೆಯಿಸಿ ರಾಮರಾಯರು ಅವರೊಂದಿಗೆ ಕೊಂಚ ಹೊತ್ತು ಮಾತನಾಡಿದರು. ಮ್ಯಾನ್ಸನ್‌ನೊಳಗಿರುವ ವ್ಯಕ್ತಿಗಳಿಬ್ಬರೂ ಬೆಳಗಿನಿಂದ ಹೊರಗಡೆ ಎಲ್ಲೂ ಹೋಗಲಿಲ್ಲವೆಂದು ಆತ ವರದಿ ಮಾಡುತ್ತಲೂ ರಾಮರಾಯರು ಜೊತೆಗಾರರೊಂದಿಗೆ ಒಳಸೇರಿದರು. ಮ್ಯಾನ್ಸನಿನ ಕೊನೆಯ ಅಂತಸ್ತಿನ ಮೇಲಿದ್ದ ಕೊಟಡಿಯೊಂದರ ಮೇಲೆ ಬೆರಳಿನಿಂದ ಸದ್ದು ಮಾಡಿದಾಗ ಸಭ್ಯ ಮನುಷ್ಯನೊಬ್ಬ ಎದ್ದು ಬಂದು ಬಾಗಿಲು ತೆರೆದು ಅವರೆಲ್ಲರನ್ನೂ ಒಳಕ್ಕೆ ಕರೆದುಕೊಂಡ.

'ನಾವು ಪದ್ಮಾಕರ ಪಾಟೀಲರನ್ನು ಕಾಣಬೇಕಾಗಿದೆ.'

'ನಿಮ್ಮ ಹೆಸರು?'

'ನನ್ನ ಹೆಸರು ಇನ್ಸ್‌ಪೆಕ್ಟರ್ ಮೋರೆ. ಇವರಿಬ್ಬರೂ ನನ್ನ ಸ್ನೇಹಿತರು.'

'ನಾನು ಹೋಗಿ ಅವರಿಗೆ ಹೇಳುತ್ತೇನೆ. ನೀವು ಕೊಂಚ ಹೊತ್ತು ಇಲ್ಲಿಯೇ ಕೂತುಕೊಂಡಿರಿ'

'ಇಲ್ಲಿ ನೋಡಿ ಪಾಟೀಲರ ಜೊತೆಗೆ ರಾಮಪುರದಿಂದ ಇನ್ನೊಬ್ಬ ಗೃಹಸ್ಥರು ಬಂದಿರುವರಲ್ಲ- ಅವರಿಗೂ ಇಲ್ಲಿಗೆ ಬರಹೇಳಿ' ಎಂದರು ರಾಮರಾಯರು.

'ರಾಮಪುರದಿಂದ ಅವರ ಜೊತೆಗೆ ಬಂದವನು ನಾನೇ. ನನ್ನ ಹೆಸರು ಜಾಧವ.'

'ಹೀಗೋ? ನಿಮ್ಮನ್ನು ಕಂಡು ತುಂಬ ಸಂತೋಷವಾಯಿತು' ಎಂದು ಇನ್ಸಪೆಕ್ಟರು ಜಾಧವನೊಂದಿಗೆ ಹಸ್ತಾಂದೋಲನ ಮಾಡಿ ಹೇಳಿದರು. ಪಾಟೀಲರನ್ನು ಕರೆದು ತರಲು ಆತ ಒಳಗಡೆ ಹೋದಾಗ ರಾಮರಾಯರು ಭಾಲೇರಾಯರ ಕಿವಿಗಳಲ್ಲಿ ಏನೋ ಗುಣುಗುಣಿಸಿದರು.

೭

# ನಿರಪರಾಧಿ !

ಪದ್ಮಾಕರನನ್ನು ಕರೆದುಕೊಂಡು ಬಂದು ಜಾಧವನು ಮೋರೆಯುವರಿಗೆ ಪರಿಚಯ ಮಾಡಿಕೊಟ್ಟ. ಔಪಚಾರಿಕ ನಮಸ್ಕಾರ ಚಮತ್ಕಾರಗಳು ನಡೆಯುತ್ತಿದ್ದಾಗ ರಾಮರಾಯರ ಮುಖಮುದ್ರೆ ಖಿನ್ನವಾಗಿ ತೋರುತ್ತಿತ್ತು. ಇಷ್ಟೊಂದು ಚಪಲತನದಿಂದ, ಧೈರ್ಯದಿಂದ, ಸಾಹಸದಿಂದ ಹಾಗೂ ನಿರ್ದಯತನದಿಂದ ಕೊಲೆ ಮಾಡುವವರು ಜಗತ್ತಿನಲ್ಲಿ ಬಹಳ ಕಡಿಮೆಯೆಂಬುದು ಅನುಭವದಿಂದಾಗಿ ಈ ಕೊಲೆಗಳನ್ನು 'ತ್ರಿಮೂರ್ತಿಗಳು' ಎಂದು ಪ್ರಸಿದ್ಧರಾದ ಆ ನಿರ್ದಯ ವ್ಯಕ್ತಿಗಳೇ ಮಾಡಿರಬೇಕೆಂದು ಅನ್ನಿಸುತ್ತಿತ್ತು. ಪದ್ಮಾಕರನ ಮೇಲೆ ಕಣ್ಣಿಟ್ಟು ಕುಳಿತಿದ್ದ ಪೋಲೀಸಿನವರು ಆತ ಮನೆಯಿಂದ ಹೊರಟಿಲ್ಲವೆಂಬುದನ್ನು ಹೇಳಿದಾಗ ಇಲ್ಲಿ ಅಪರಾಧಿಗಳು ಸಿಕ್ಕಲಾರರೆಂದು ಅವರಿಗೆನ್ನಿಸಿತ್ತು. ಅದಕ್ಕೆ ಮೊದಲು ಆ 'ತ್ರಿಮೂರ್ತಿ'ಗಳೇ ತಂಡದ ಹೆಸರು ಬದಲಾಯಿಸಿಕೊಂಡು ಹಿರಾಮಣೇಕ ಮ್ಯಾನ್ಸನ್‌ದಲ್ಲಿರಬಹುದೆಂದು ಅವರ ಕಲ್ಪನೆಯಿತ್ತು. ಆದರೆ ಪದ್ಮಾಕರ ಮತ್ತು ಜಾಧವರ ಮುಖ ದೃಷ್ಟಿಗೆ ಬೀಳುತ್ತಲೂ ರಾಮರಾಯರ ಮುಖ ಇಳಿಯಿತು. 'ತ್ರಿಮೂರ್ತಿ'ಗಳ ತಂಡದೊಂದಿಗೆ ಅವರಿಗೆ ಎಷ್ಟೋ ಸಲ ಠಿಕ್ಕಾಟವಾಗಿದ್ದಿದ್ದರಿಂದ ಅವರೆಲ್ಲರ ಮುಖಪರಿಚಯ ಅವರಿಗೆ ಚೆನ್ನಾಗಿಯೆ ಇದ್ದಿತು. ಈ ಇಬ್ಬರು ಅಸಾಮಿಗಳಿಂದಲಾದರೂ ಸಾಧ್ಯವಿದ್ದಷ್ಟು ವಿಚಾರಗಳನ್ನು ತಿಳಿದುಕೊಳ್ಳಬೇಕೆಂದು ನಿಶ್ಚಯಿಸಿ, ತಮ್ಮ ನಿರಾಶೆಯನ್ನೆಲ್ಲ ಮನಸ್ಸಿನಲ್ಲೇ ಹುದುಗಿಸಿ, ರಾಮರಾಯರು ಪದ್ಮಾಕರನನ್ನು ಸ್ವಾಗತಿಸಿದರು.

'ನನ್ನ ಭೆಟ್ಟಿಗಾಗಿ ಬಂದವರು ತಾವೇ ಏನು?'

'ಹೌದು ಮಿ. ಪಾಟೀಲ' ಎಂದರು ಇನ್ಸಪೆಕ್ಟರರು.

'ತಮಗೆ ನನ್ನಿಂದ ಏನಾಗಬೇಕು ಹೇಳಿ, ಸಾಧ್ಯವಿರುವ ಸಹಾಯ ಮಾಡಲು ನಾನು ಸಿದ್ಧನಿದ್ದೇನೆ. ಕೂತುಕೊಳ್ಳಿ ಸ್ವಲ್ಪ ಹೊತ್ತು. ಫಲಾಹಾರಕ್ಕೆ ಹೇಳಿ ಕಳಿಸುತ್ತೇನೆ.'

‘ ಬೇಡ ಬೇಡ. ಥ್ಯಾಂಕ್ಸ್ ನಾವೆಲ್ಲರೂ ಚೆನ್ನಾಗಿ ಫಲಾಹಾರ ಮಾಡಿಕೊಂಡೇ ಬಂದಿದ್ದೇವೆ. ಅಲ್ಲದೆ ನಮ್ಮ ಕೆಲಸವೂ ಅತ್ಯಂತ ಮಹತ್ವದ್ದು; ಅಷ್ಟು ಕಾಲಾವಕಾಶವೂ ನಮಗಿಲ್ಲ.’

‘ ತಮ್ಮ ಇಷ್ಟ’ ಎಂದು ಹೇಳಿ ಪದ್ಮಾಕರ ವಿಷಾದವನ್ನು ಸೂಚಿಸಿದ.

‘ ತಾವಿಬ್ಬರೂ ಪೋಲೀಸು ಸ್ಟೇಶನ್ನಿನಲ್ಲಿ ಬರೆದುಕೊಟ್ಟ ಜವಾಬನ್ನು ನಾನು ನೋಡಿದ್ದೇನೆ. ಪೋಲೀಸ್ ಖಾತೆಯಲ್ಲಿನ ಜವಾಬುದಾರಿ ಅಧಿಕಾರಿಗೆ ವಿನಾ ಬೇರೆ ಯಾರಿಗೂ ಹೆಚ್ಚು ಸಂಗತಿ ತಿಳಿಸಲು ಸಾಧ್ಯವಿಲ್ಲವೆಂದು ನಿಮ್ಮ ಹೇಳಿಕೆಯಿರುವುದರಿಂದ ನಾನು ನಿಮ್ಮ ಭೆಟ್ಟಿಗಾಗಿ ಬಂದಿದ್ದೇನೆ. ನೀವು ನರಜೀವನದಾಸ ಶೇಟಜಿಗೆ ಬರೆದ ಪತ್ರವನ್ನು ನಾನು ಓದಿದ್ದೇನೆ.’

‘ ಒಂದು ದೃಷ್ಟಿಯಿಂದ ಅದು ಒಳ್ಳೆಯದೇ ಆಯಿತು. ಇಲ್ಲವಾದರೆ ಆ ಕತೆ ಹೇಳುವುದರಲ್ಲೇ ಬಹಳ ಹೊತ್ತು ಹೋಗುತ್ತಿತ್ತು’ ಎಂದು ಪದ್ಮಾಕರ ಶಾಂತರೀತಿಯಿಂದ ಹೇಳುತ್ತಿದ್ದ : ‘ ಅನೇಕ ವರ್ಷಗಳಿಂದ ನಾನು ರಾಮಪುರದ ಬಾಬೂರಾಯರ ಕಾರಭಾರಿಯಾಗಿದ್ದೇನೆ. ಉತ್ತರ ಹಿಂದುಸ್ಥಾನದಲ್ಲಿನ ಸಂಸ್ಥಾನವೊಂದರಿಂದ ಮುತ್ತುರತ್ನದ ಒಡವೆಗಳು ಮುಂಬಯಿಗೆ ಪಾರಾಟಕ್ಕೆ ಬರಲಿದ್ದುದು ತಮಗೆ ಗೊತ್ತಿದ್ದೀತು ? ’

‘ಇಲ್ಲ ಎಂದು ಮೋರೆ ನಿರ್ವಿಕಾರ ಮುದ್ರೆಯಿಂದ ನುಡಿದರು. ಆದರೆ ಗುಪ್ತಪೋಲೀಸ್ ಖಾತೆಗೆ ಈ ಸುದ್ದಿ ಎಷ್ಟೋ ದಿನಗಳಿಗೆ ಹಿಂದೆಯೆ ಗೊತ್ತಾಗಿ ಹೋಗಿತ್ತು. ರಾಮರಾಯರಿಗೂ ಬೇರೆ ಕಡೆಯಿಂದ ಈ ಸುದ್ದಿ ತಿಳಿದಿತ್ತು. ಪುರಾತನಕಾಲದ ಮುತ್ತುರತ್ನ ಹಾಗೂ ಬಾಬೂರಾವ್ ಜೊತೆಯಾದಾಗ ಯಾವುದಾದರೊಂದು ಅಪರಾಧ ನಡೆಯುವುದು ಖಂಡಿತವೆಂಬುದೂ ಅವರಿಗೆ ಮನವರಿಕೆಯಾಗಿತ್ತು.

‘ನಿಮಗೆ ಗೊತ್ತಿಲ್ಲ ಎಂದರೆ ನಿಜಕ್ಕೂ ಆಶ್ಚರ್ಯವೆ?’ ಎಂದು ನುಡಿದು ಪದ್ಮಾಕರ ‘ಜಾಧವ, ಜರ್ನಲ್ ಈ ಕಡೆ ಕೊಡಿ’ ಎಂದ.

ಜಾಧವನು ತಂದ ಆ ಪತ್ರಿಕೆಯಲ್ಲಿ ರತ್ನ ಗೋಲದ ಜಾಹಿರಾತು ಪ್ರಕಟವಾದ ಪುಟವನ್ನು ತೆರೆದು ಇನ್ಸಪೆಕ್ಟರ ಕೈಗೆ ಕೊಟ್ಟು ಪದ್ಮಾಕರ ಹೇಳಿದ. 'ಮುಂಬಯಿಗೆ ಮಾರಾಟಕ್ಕಾಗಿ ಬರಲಿರುವ ಈ ಮುತ್ತು ರತ್ನದ ಒಡವೆಗಳ ಜಾಹೀರಾತು ನೋಡಿ. ಈ ಒಡವೆಗಳು ಯಾವಾಗ ಹಾಗೂ ಯಾವ ಮೂಲಕ ಮಾರಾಟಕ್ಕೆ ಬರುವವೆಂಬ ವಿಚಾರವನ್ನು ತಿಳಿದುಕೊಂಡು ನಮ್ಮ ಮಾಲೀಕರು ನನ್ನನ್ನು ಈ ಕಡೆಗೆ ಕಳುಹಿಸಿದರು. ಈ ಯಾದಿಯಲ್ಲಿ ನಮೂದಿಸಿರುವ ರತ್ನ ಗೋಲವನ್ನು ಖರೀದಿ ಮಾಡಲು ಪ್ರಯತ್ನಿಸಬೇಕೆಂದು ಅಪ್ಪಣೆ ಕೊಟ್ಟನು. ಬಂಗಾಲೀ, ಮದರಾಸೀ ಹಾಗೂ ಕೆಲವು ಪರದೇಶೀ ವ್ಯಾಪಾರಿಗಳು ಸಹ ಆ ರತ್ನ ಗೋಲವನ್ನು ದೊರಕಿಸಲು ಮುಂಬಯಿಗೆ ಬರಲಿದ್ದುದು ನಮ್ಮ ಮಾಲೀಕರಿಗೆ ತಿಳಿದಿತ್ತು.

'ನರಜೀವನ ಶೇಟಜಿಯವರ ಜೊತೆಗೆ ಬಾಬೂರಾಯರು ಇದುವರೆಗೆ ಸಾಕಷ್ಟು ವ್ಯವಹಾರ ಮಾಡಿದ್ದಾರೆ. ರತ್ನಗಳು ಯಾರ ಮೂಲಕ ಮಾರಾಟಕ್ಕೆ ಬಂದರೂ ಸರಿಯೆ, ನರಜೀವನ ಶೇಟಜಿಯವರ ಮಧ್ಯಸ್ತಿಕೆ ದೊರೆತಲ್ಲಿ ಅವು ಸರಿಯಾದ ಬೆಲೆಗೆ ಸಿಕ್ಕುವವೆಂದು ನಮ್ಮ ಮಾಲೀಕರು ನಂಬಿದ್ದಾರೆ. ಅದಕ್ಕಾಗಿಯೆ ಅವರು ನನ್ನನ್ನಲ್ಲಿಗೆ ಕಳುಹಿಸಿದ್ದ. ಅಂತೆಯೆ ನಾನು ಶೇಟಜಿಯವರಿಗೆ ಕಾಗದ ಬರೆದು ಆನಂತರ ಅವರನ್ನು ಭೆಟ್ಟಿಯಾದೆ.

'ರತ್ನಗೋಲದ ಮೇಲೆ ಕೂಡಿಸಲ್ಪಟ್ಟ ರತ್ನಗಳ ಹಾಗೂ ಚಿನ್ನದ ಅಂದಾಜು ಬೆಲೆಯೆಷ್ಟಾಗಬಹುದೆಂಬುದನ್ನು ನೋಡುವುದಕ್ಕಾಗಿಯೆ ನಿನ್ನೆ ರಾತ್ರಿ ಹೀರಾಸಿಂಗರನ್ನು ನರಜೀವನ ಶೇಟಜಿಯ ಅಂಗಡಿಗೆ ಕರೆಯಿಸಿದ್ದು. ಆದರೆ ನಾವು ಅಲ್ಲಿಗೆ ಹೋದಾಗ ಅಲ್ಲಿ ಮೂರು ಕೊಲೆಗಳಾದುದು ಗೊತ್ತಾಯಿತು. ಮುಂದಿನ ಸಂಗತಿಯೆಲ್ಲ ನಿಮಗೆ ಗೊತ್ತಿದೆ. ನಾನೀಗ ಹೇಳಿದುದಕ್ಕಿಂತ ಹೆಚ್ಚಿನ ಸಂಗತಿಯೇನಾದರೂ ನಿಮಗೆ ಬೇಕಿದ್ದಲ್ಲಿ ತುಂಬ ಸಂತೋಷದಿಂದ ತಿಳಿಸುವೆ.'

ಪಾಟೀಲರ ಹೇಳಿಕೆಯಲ್ಲಿ ಯಾವ ದೋಷವನ್ನೂ ಮೊದಲ ಬಾರಿಗೇ ಕಂಡು ಹಿಡಿಯುವಂತಿರಲಿಲ್ಲ ಮೋರೆಸಾಹೇಬರಿಗೆ ಹಾಗೆನ್ನಿಸಿದ್ದೂ ಉಂಟು.

ಆದರೆ ರಾಮರಾಯರಿಗೆ ಮಾತ್ರ ಈ ಹೇಳಿಕೆಯಲ್ಲಿನ ಎಳೆಗಳು ಸಿಕ್ಕಿಹಾಗಿತ್ತು. ಬಾಬೂರಾಯರ ಪ್ರೇರಣೆಯಿಂದ ಪಾಟೀಲ ಕೆಲಸ ಮಾಡುತ್ತಿರುವುದೂ ಅವರ ಸಂಶಯಕ್ಕೆ ಸಾಕಾಗಿತ್ತು.

ತನ್ನ ಮಾತನ್ನು ಮುಗಿಸಿದ ಬಳಿಕ ಪದ್ಮಾಕರ ಕೋಣೆಯಲ್ಲಿನ ತಿಜೋರಿಯ ಬಳಿ ಹೋಗಿ ಅದರೊಳಗಿನಿಂದ ಕಾಗದಪತ್ರಗಳದೊಂದು ಕಟ್ಟನ್ನೂ ಒಂದು ಚರ್ಮದ ಬ್ಯಾಗನ್ನೂ ತೆಗೆದುಕೊಂಡ. ನರಜೀವನದಾಸರಿಗೆ ತೋರಿಸಿದ್ದ ಕಾಗದಪತ್ರಗಳನ್ನೇ ಅವರಿಗೂ ತೋರಿಸಿದ. ಇನ್ಸಪೆಕ್ಟರು ಅವುಗಳನ್ನು ನೋಡಿ ರಾಮರಾಯರಿಗೆ ಕೊಟ್ಟರು. ನರಜೀವನದಾಸರಂಥ ಜಾಗರೂಕ ವ್ಯಾಪಾರಿಗೂ ಸಹ ಯಾವ ಕಾಗದಪತ್ರಗಳಿಂದ ನಂಬಿಕೆ ಹುಟ್ಟಿದ್ದಿತೋ ಅವುಗಳ ಬಗ್ಗೆ ಸಂದೇಹೀ ಸ್ವಭಾವದ ಪೋಲೀಸರಿಗೂ ಸಹ ಯಾವ ಅಪನಂಬಿಕೆಯೂ ಉಂಟಾಗಲಾರದೆಂದು ಪದ್ಮಾಕರ ಭಾವಿಸಿದ್ದ. ಸುಮಾರು ಕೋಟಿ ರೂಪಾಯಿಗಳನ್ನು ಜೊತೆಗೆ ತಂದ ಮನುಷ್ಯನ ನಂಬಿಕೆ, ಹಾಗು ಕೋಟಿ ರೂಪಾಯಿಗಳನ್ನು ಒಂದು ರತ್ನಗೋಲಕ್ಕಾಗಿ ಖರ್ಚು ಮಾಡಲು ಸಿದ್ಧನಾದವನ ಸಂಪತ್ತೂ ಹಾಗೂ ಯೋಗ್ಯತೆಗಳ ಬಗ್ಗೆ ಯಾವುದೇ ಬಗೆಯ ಸಂದೇಹ ತಂದುಕೊಳ್ಳುವ ಸಾಹಸ ಯಾರಿಂದಲೂ ಆಗಲಾರದೆಂದು ಬಾಬೂರಾಯರು ನಂಬಿದ್ದರು.

ರಾತ್ರಿ ಒಂಬತ್ತು ಗಂಟೆಗೆ ರತ್ನಗೋಲದ ಪರೀಕ್ಷೆಗಾಗಿ ಎಲ್ಲರೂ ಅಂಗಡಿಯಲ್ಲಿ ಸೇರಬೇಕಾಗಿತ್ತು. ನರಜೀವನದಾಸ್ ಮತ್ತು ಹೀರಾಸಿಂಗರಿಬ್ಬರೂ ಅಲ್ಲಿ ಹಾಜರಿದ್ದರು. ರತ್ನಗೋಲವನ್ನು ಹೀರಾಸಿಂಗ ತಂದಿರಲೇಬೇಕು. ಹಾಗಾದರೆ ಅದೆಲ್ಲಿ ಹೋಯಿತು ? ಮುಂಬಯಿಗೆ ಬಂದ ಒಡವೆಗಳಷ್ಟು, ರಾತ್ರಿ ಶೇಟಜಿಯ ಅಂಗಡಿಗೆ ಹೋಗುವಾಗ ಹೀರಾಸಿಂಗರು ರತ್ನಗೋಲವನ್ನು ಒಯ್ದಿದ್ದರೋ ಇಲ್ಲವೊ? ರತ್ನಗೋಲ ಹಾರಿಸಿದವರಂತೂ ತಮ್ಮ ತಿಳಿವಳಿಕೆಯಿದ್ದ ಮೇರೆಗೆ ಸಾಧ್ಯವಾದಷ್ಟು ಎಚ್ಚರಿಕೆ ವಹಿಸಿ ಹಿಂದೆ ಯಾವ ಪುರಾವೆಯನ್ನೂ ಬಿಟ್ಟಿರಲಿಲ್ಲ.

ಪದ್ಮಾಕರನ ಹೇಳಿಕೆ ಮುಗಿದು, ಕಾಗದ ಪತ್ರಗಳನ್ನೆಲ್ಲ ನೋಡಿಯಾದ

ಕೆಲವು ಪ್ರಶ್ನೆ ಕೇಳುವುದಿದೆಯೆಂದು ಕಣ್ಣುಸನ್ನೆಯಿಂದ ಮೋರೆಯುವರಿಗೆ ತಿಳಿಸಿದರು. ಅವರೂ ಸನ್ನೆಯಿಂದಲೇ ಒಪ್ಪಿಗೆ ಇತ್ತರು.

'ಇನ್ಸಪೆಕ್ಟರ್ ಸಾಹೇಬ್' ರಾಮರಾಯರು ಶಾಂತ ಆದರೆ ದೃಢಸ್ವರ ದಲ್ಲಿ ಹೇಳತೊಡಗಿದರು, 'ತಮ್ಮ ಒಪ್ಪಿಗೆಯಿದ್ದರೆ ನಾನು ಪಾಟೀಲರೊಂದಿಗೆ ಕೊಂಚ ಮಾತನಾಡಬೇಕೆಂದು ಅಪೇಕ್ಷಿಸುತ್ತೇನೆ. ನಿನ್ನೆ ರಾತ್ರಿ ಅಂಗಡಿ ಯಲ್ಲಿ ಖೂನಿ ನಡೆದಾಗ ರತ್ನಗೋಲ ಅಲ್ಲಿದ್ದಿತೆಂದು ತಮಗೆನ್ನಿಸುವುದೇನು?'

'ಹೌದು. ನಾನೂ ಹಾಗೇ ತರ್ಕಿಸಿದ್ದೇನೆ' ಪದ್ಮಾಕರನೆಂದ. 'ಏಕೆಂ ದರೆ ಹೀರಾಸಿಂಗರು ತಮ್ಮ ಜೊತೆಗೆ ರತ್ನಗೋಲವನ್ನು ತರಲು ನಿರಾಕರಿಸಿ ದ್ದರೆ ತಕ್ಷಣ ಶೇಟಜಿ ನನಗೆ ಫೋನ್ ಮೂಲಕ ತಿಳಿಸುತ್ತಿದ್ದರು.'

'ಸರಿಯೆ. ಕಾನಸ್ಟೇಬಲ್ ಜೊತೆಗೆ ತಾವು ಅಂಗಡಿಯೊಳಕ್ಕೆ ಹೋದಾಗ ರತ್ನಗೋಲ ಅಲ್ಲಿದ್ದಿತೋ ಹೇಗೆ?'

'ಇಲ್ಲ. ಆದರೆ ನರಜೀವನ ಶೇಟಜಿ ಅದನ್ನು ತಮ್ಮ ತಿಜೋರಿಯಲ್ಲಿ ಹಾಕಿ ಇಟ್ಟಿರಬಹುದಾದ ಸಂಭವವೂ ಉಂಟು' ಎಂದು ಪದ್ಮಾಕರ ಗೊಂದಲ ದಲ್ಲಿ ಬಿದ್ದು ನುಡಿದ.

'ಇರಬಹುದು. ಆದರೆ ಸರಿಯಾಗಿ ಒಂಬತ್ತು ಗಂಟೆಗೆ ನೀವೂ ಅವರೂ ಭೆಟ್ಟಿಯಾಗುವುದಿತ್ತು. ಆಗ ರತ್ನಗೋಲದ ಪರೀಕ್ಷೆಯೂ ನಡೆಯು ಲಿತ್ತು. ಆದ್ದರಿಂದ ಅವರು ರತ್ನಗೋಲವನ್ನಾಗ ತಿಜೋರಿಯಲ್ಲಿರಿಸುವ ಗಲಾಟೆಗೆ ಬೀಳಲಾರರೆಂದೆನ್ನಿಸುತ್ತದೆ.'

ರಾಮರಾಯರ ಪ್ರಶ್ನೆಗಳ ಓಘ ಕಠಿನ ದಾರಿಗೆಳೆಯುವುದನ್ನು ಕಂಡು ಪದ್ಮಾಕರ ಗೊಂದಲದಲ್ಲಿ ಬಿದ್ದವನಂತಾದ. ಈ ಪಾಟೀ ಸವಾಲಿನಿಂದ ತಪ್ಪಿಸಿಕೊಳ್ಳಲೆಂದು ಆತ ರಾಮರಾಯರನ್ನು ಕೇಳಿದ.

'ತಾವೇನೂ ಪೋಲೀಸ್ ಖಾತೆಯ ಅಧಿಕಾರಿಗಳಂತೆ ತೋರುವುದಿಲ್ಲ. ನನ್ನ ಪಾಟೀಸವಾಲು ಮಾಡಲು ತಮಗಾವ ಅಧಿಕಾರವಿದೆಯೆಂಬುದನ್ನಷ್ಟು ತಿಳಿಸಿದರೆ ಒಳ್ಳೆಯದಾದೀತು.'

‘ ನನ್ನ ಹೆಸರು ರಾಮರಾವ್. ಈ ಕೇಸ್‌ನಲ್ಲಿ ಇನ್ಸಪೆಕ್ಟರ್ ಮೋರೆ ಯವರ ಜತೆಗೆ ನಾನು ಕೆಲಸ ಮಾಡುತ್ತಿದ್ದೇನೆ ’

ರಾಮರಾವ್ ಎಂಬ ಹೆಸರ [illegible] ಪದ್ಮಾಕರನ ಮುಖ ಮುದ್ರೆ ಬದಲಾಯಿಸಿತು. ತನ್ನ [illegible] ಪ್ರತ್ಯಕ್ಷ [illegible]ನಾಗಿರ ದಿದ್ದರೂ ಸಹ ಅಪರಾಧ ಜರುಗಲಿದೆಯೆಂಬ ಸುದ್ದಿ ತನಗೆ ತಿಳಿದಿತ್ತು. ಆದರೂ ಅದನ್ನಾಗ ಪೋಲೀಸಿನವರಿಗೆ ತಿಳಿಸಲಿಲ್ಲ. ಅದೂ ಸಹ ಒಂದು ರೀತಿಯಿಂದ ಅಪರಾಧವೇ ಆದಂತಾಯಿತು ಜಾಧವನಿಗೆ ಆ ಅಪರಾಧಿಗಳ ಪೂರ್ಣ ಸಂಗತಿ ತಿಳಿದಿದ್ದುದು ಪದ್ಮಾಕರನಿಗೆ ಗೊತ್ತಿತ್ತು. ರಾಮರಾಯರು ಈ ವಿಚಾರವನ್ನು ತನ್ನಿಂದ ಹೊರಡಿಸಿ ಬಿಡುವರೆಂದು ಅವನಿಗೆನ್ನಿಸತೊಡ ಗಿತು ಒಂದೇ ಒಂದು ಕ್ಷಣ ಮಾತ್ರ ಅವನ ಮನಸ್ಸು ಈ ರೀತಿ ಚಲವಿಚಲ ವಾಯಿತಾದರೂ ಅದು ರಾಮರಾಯರ ದೃಷ್ಟಿಗೆ ಬೀಳದಿರಲಿಲ್ಲ. ಒಡನೆಯೆ ಧೈರ್ಯ ತಂದುಕೊಂಡು ಪದ್ಮಾಕರನೆಂದ :

‘ ಯಾರು ? ಡಿಟೆಕ್ಟಿವ್ ರಾಮರಾಯರೇನು ? ತಮ್ಮ ಭೆಟ್ಟಿಯಿಂದಾಗಿ ನನಗೆ ತುಂಬ ಸಂತೋಷ. ತಮ್ಮ ಹೆಸರು ಕೇಳುತ್ತಲೂ ಪಕ್ಕಾ ಕಳ್ಳರೆಲ್ಲ ನಡುಗುವರೆಂದು ನಾನು ಕೇಳಿದ್ದೇನೆ.’

‘ ತಾವು ನನ್ನ ಬಗ್ಗೆ ಈ ರೀತಿ ಒಳ್ಳೆಯ ಅಭಿಪ್ರಾಯವನ್ನಿಟ್ಟುಕೊಂಡ ಬಗ್ಗೆ ನಾನು ಬಹಳ ಆಭಾರಿಯಾಗಿದ್ದೇನೆ. ಇಲ್ಲಿ ನೋಡಿ, ಮಿ. ಪಾಟೀಲ, ಪ್ರತಿಯೊಂದು ಕೊಲೆಯ ಪ್ರಕರಣದಲ್ಲೂ ನನಗೆ ಒಂದೇ ಒಂದು ವಿಚಾರ ಮತ್ತೆ ಮತ್ತೆ ಕಂಡುಬಂದಿದೆ. ಖೂನಿಯ ಹಾಗೂ ಅದೇ ಕಾಲಕ್ಕೆ ನಡೆಯುವ ಇತರ ಅಪರಾಧಗಳ ಬಗ್ಗೆ ಯಾವ ಪುರಾವೆಯೂ ಸಿಕ್ಕದಂತೆ ಅಪರಾಧಿಗಳು ಎಷ್ಟೇ ಪ್ರಯತ್ನ ಮಾಡಿದರೂ ಒಂದಿಲ್ಲೊಂದು ಆಧಾರ ದೊರೆತೇ ದೊರೆಯುತ್ತದೆ. ಅದೇ ಮೇರೆಗೆ ಕೊಲೆ ಮಾಡುವಲ್ಲಿ ಮನುಷ್ಯನಿಗೆ ಯಾವು ದಾದರೊಂದು ! ಉದ್ದೇಶ ವಿದ್ದೇ ಇರುತ್ತದೆ ರತ್ನಗೋಲ ಅಮೌಲ್ಯವಾದ ವಸ್ತುವಾಗಿದೆಯಾದ್ದರಿಂದ ಅದರ ಪ್ರಾಪ್ತಿಗಾಗಿ ಎಂಥ ಅಪರಾಧವನ್ನೂ ಮಾಡಲು ಮನುಷ್ಯ ಸಿದ್ಧನಾಗುತ್ತಾನೆ. ಇದುವರೆಗೆ ನನಗೆ ದೊರೆತ ಪುರಾವೆ

ಗಳಿಂದಾಗಿ ನಿನ್ನೆ ರಾತ್ರಿ ಕೊಲೆಗಳಾದಾಗ ರತ್ನಗೋಲವೂ ಕಳವಾಗಿದೆಯೆಂದು ನಾನು ತಿಳಿದಿದ್ದೇನೆ.'

'ಹಾಗೆನ್ನಿಸುವುದೇನೊ ನಿಜ.' ರಾಮರಾಯರ ವಿಚಾರ ಚಕ್ರಗಳಿಗೆ ಸಿಕ್ಕಿಬೀಳದಂತೆ ಎಚ್ಚರ ವಹಿಸುವುದಕ್ಕಾಗಿ ಸಾಧ್ಯವಿದ್ದಷ್ಟು ಕಡಿಮೆ ಮಾತನಾಡುವುದೇ ಒಳ್ಳೆಯದೆಂದು ಪದ್ಮಾಕರ ನಿರ್ಧರಿಸಿದ್ದ.

'ಇವೊತ್ತು ನಡೆದ ಇನ್ನೊಂದು ಖೂನಿಯ ಸಮಾಚಾರ ತಮಗೆ ತಿಳಿದಿರಬಹುದು........' ಎಂದರು ರಾಮರಾಯರು.

'ಇನ್ನೊಂದು ಖೂನಿ? ಅಬ್ಬ? ಎಲ್ಲಿ? ಯಾರದು? ಯಾವಾಗ?'

'ಅರ್ಧಗಂಟೆಯಾಯಿತು ಅಷ್ಟೆ. ಹೀರಾಸಿಂಗರ ಆಫೀಸಿನಲ್ಲಿ ಅವರ ಮ್ಯಾನೇಜರರ ಕೊಲೆಯಾಯಿತು. ನಾವು ಮೂವರೂ ಈಗ ಅಲ್ಲಿಂದಲೇ ಬಂದೆವು. ಈ ಖೂನಿ ಮಾಡುವುದಕ್ಕೂ ಇಬ್ಬರೇ ಇಬ್ಬರು ಬಂದಿದ್ದರು. ಕಾಣಿಸಲು ಸಭ್ಯರಾದರೂ ಪಕ್ಕಾ ಬದ್ಮಾಷ ಜನ. ಅವರಾರೋ ಬೇರೆ ಪ್ರಾಂತದವರೆಂದು ಅಲ್ಲಿಯ ಜನ ಹೇಳಿದರು.'

ದ್ಮಾಕರ ಕೊಂಚಹೊತ್ತು ಯೋಚಿಸಿ ಅನಂತರ ಜಾಧವನಕಡೆ ತಿರುಗಿ 'ಜಾಧವ, ಈ ಜನರು ಆ ಬಂಗಾಲೀ ಗುಂಪಿನವರಿರಬಹುದೇನು?' ಎಂದು ಕೇಳಿದ

'ಇದೆಲ್ಲಿಯ ಗುಂಪು?' ಎಂದು ಕೇಳಿದರು ರಾಮರಾಯರು.

'ನನಗೇನೂ ಅಷ್ಟೊಂದು ತಿಳಿಯದು. ಆದರೆ ಬಂಗಾಲದಲ್ಲಿನ ಕೆಲವರು ಸುಸಂಪನ್ನ ಜಾಗಿರದಾರರೂ ವ್ಯಾಪಾರಿಗಳೂ ಒಂದುಗೂಡಿ ರತ್ನಗೋಲವನ್ನು ಕೊಂಡುಕೊಳ್ಳಲೇಬೇಕೆಂದು ನಿರ್ಧರಿಸಿರುವುದಾಗಿ ಬಾಬೂರಾಯರು ಹೇಳುತ್ತಿದ್ದರು. ಕಲಕತ್ತೆಯ ಪ್ರಖ್ಯಾತ ರತ್ನಪಡಿ ವ್ಯಾಪಾರಿಗಳಾದ ರಜನೀಕಾಂತ ಗುಪ್ತರೇ ಈ ಗುಂಪು ಕಟ್ಟಿರುವರೆಂದೂ ಅವರೆನ್ನುತ್ತಿದ್ದರು.'

' ನನಗೇನೂ ಇದನ್ನು ನಂಬಲಾಗುವುದಿಲ್ಲ. ಈ ಬಂಗಾಲೀ ವ್ಯಾಪಾರಸ್ಥನ ಬಗ್ಗೆ ನನಗೆ ಒಳ್ಳೆಯ ಅಭಿಪ್ರಾಯವುಂಟು. ಅವರ ಅಂಗಡಿಯಲ್ಲಿ ನಡೆದ ಎರಡು ಮೂರು ಕಳವುಗಳ ತಪಾಸಣೆಯ ಕಾಲಕ್ಕೆ ನನಗವರು ತುಂಬ ಸಹಾಯ ಮಾಡಿದ್ದರು. ಖೂನಿ ಮತ್ತು ಕಳವುಗಳಂತಹ ಭೀಕರ ಕೃತ್ಯಗಳನ್ನವರು ಮಾಡಿಸಲಾರರೆಂಬುದು ನನ್ನ ನಂಬಿಕೆ.'

' ಹಾಗಾದರೆ ಈ ಖೂನಿಯ ಪ್ರೇರಕರಾರೆಂಬ ಬಗ್ಗೆ ನನಗಂತೂ ಏನೂ ಹೊಳೆಯುವುದಿಲ್ಲ.'

' ಸರಿ ಅದನ್ನು ಪತ್ತೆ ಮಾಡುವ. ತಾವು ಇಷ್ಟೊಂದು ಸಂಗತಿಗಳನ್ನು ತಿಳಿಸಿದ್ದಕ್ಕಾಗಿ ನಾನು ತಮಗೆ ತುಂಬ ಆಭಾರಿಯಾಗಿದ್ದೇನೆ. ಈಗ ನಾವು ಹೊರಡುವೆವು. ತೊಂದರೆಗಾಗಿ ಕ್ಷಮಿಸಬೇಕು. ಖೂನಿಗಳ ವಿಚಾರಣೆಯ ಕಾಲಕ್ಕೆ ತಾವು ಹಾಜರಿರಬೇಕಾಗುವುದು' ಎಂದು ಹೇಳಿ ರಾಮರಾಯರು ತಮ್ಮ ಜೊತೆಗಾರರೊಂದಿಗೆ ಅಲ್ಲಿಂದ ತೆರಳಿದರು.

೮

# ಫೋನಿನಲ್ಲಿ ಮಾತುಕತೆ

ಹೀರಾಮಣೇಕ ಮ್ಯಾನ್ಶನ್‌ದಿಂದ ಹೊರಬರುತ್ತಲೂ ರಾಮರಾಯರು ಒಂದು ಟ್ಯಾಕ್ಸಿ ಕೂಗಿದರು. ಅದು ಬರುತ್ತಲೂ ಎಲ್ಲರೂ ಅದರಲ್ಲಿ ಕುಳಿತುಕೊಂಡು ಕೋಟೆಯಕಡೆ ನಡೆದರು.

' ಇನ್ನು ಮುಂದಿನ ಕಾರ್ಯಕ್ರಮವೇನು?' ಎಂದರು ಮೋರೆ.

' ಈ ಪ್ರಕರಣದ ಬಗ್ಗೆ ನನ್ನ ಪ್ಲ್ಯಾನ್ ತಯಾರಾಗಿದೆ. ಪೋಲಿಸ್ ಖಾತೆಯ ಅಪ್ಪಣೆಯಿಂದ ಯಾವುದೇ ಫೋನ್ ನಂಬರಿನ ಜೊತೆಗೆ ಸಂಬಂಧ ಹಚ್ಚಿಕೊಂಡು ನಡೆಯುವ ಸಂಭಾಷಣೆಯನ್ನೆಲ್ಲ ಕೇಳಲು ಸಾಧ್ಯವಿದೆಯೆಂಬುದು ನಿಮಗೆ ಗೊತ್ತೇ ಇದೆ. ನಾನು ಸ್ವತಃ ಫೋನಿಗೆ ಕುಳಿತುಕೊಳ್ಳುವೆ.

ಗುಪ್ತಪೋಲೀಸ್ ಖಾತೆಯು ಇನ್ನೂ ಇಬ್ಬರು ಪೋಲೀಸರನ್ನು ಹಿರಾಮಣೇಕ್ ವ್ಯಾನ್ಸನ್ನಿಗೆ ಪಹರೆಗಾಗಿ ಕಳುಹಿಸಿಕೊಡಿರಿ. ಅಲ್ಲಿರುವ ವ್ಯಕ್ತಿಗಳ ಪ್ರತಿಯೊಂದು ಚಟುವಟಿಕೆಯನ್ನೂ ಹತ್ತು ಹದಿನೈದು ನಿಮಿಷಗಳಿಗೊಂದು ಬಾರಿ ನನಗೆ ವರದಿಯಾಗುವಂತೆ ಏರ್ಪಾಡು ಮಾಡಬೇಕು. ಬಾಲೀರಾಯರನ್ನು ನನ್ನೊಂದಿಗೆ ಟೆಲಿಗ್ರಾಫ್ ಆಫೀಸಿಗೆ ಕಳುಹಿಸುವವನಿದ್ದೇನೆ. ಕಲಕತ್ತೆಯ ರಜನೀಕಾಂತ ಗುಪ್ತ ನನಗೆ ಪರಿಚಿತರು. ಅವರಿಗೂ ಸಹ ರತ್ನಗೋಲದ ಬಗ್ಗೆ ಮೋಹವಿದೆಯೇನೋ ಎಂಬುದು ನನಗೆ ತಿಳಿಯಬೇಕಾಗಿದೆ. ಅವರಿಗೆ ಅರ್ಜಂಟ್ ತಂತಿ ಬಿಟ್ಟು, ರತ್ನದೊಡವೆಗಳ ಖರೀದಿಗಾಗಿ ನೀವು ಪ್ರಯತ್ನಿಸುತ್ತಿರುವಿರಾ ಹೇಗೆಂದು ಕೇಳುವವನಿದ್ದೇನೆ. ತಮ್ಮ ಪ್ರತಿನಿಧಿಗಳನ್ನು ಅವರು ಈ ಕೆಲಸಕ್ಕಾಗಿ ಮುಂಬಯಿಗೆ ಕಳುಹಿಸಿದ್ದರೆ ಅವರ ಹೆಸರು ವಿಳಾಸ ತಿಳಿಸಲೂ ಕೇಳುವವನಿದ್ದೇನೆ. ಅವರು ತಕ್ಷಣ ಉತ್ತರ ಕೊಡುವರೆಂಬ ಬಗ್ಗೆ ನನಗೆ ಪೂರಾ ನಂಬಿಕೆಯಿದೆ.'

ರಾಮರಾಯರ 'ಪ್ಲ್ಯಾನು' ಅದ್ಭುತವೂ, ಸಾಹಸಯುಕ್ತವೂ ಆಗಿರಬಹುದೆಂದು ನಿರೀಕ್ಷಿಸಿದ್ದ ಮೋರೆಯವರಿಗೆ ಈ ಸಾದಾ ಪ್ಲ್ಯಾನನ್ನು ತಿಳಿದು ಸೋಜಿಗವೇ ಆಯಿತು. ಅವರು ಭುಜ ಹಾರಿಸಿ ಹೇಳಿದರು– 'ಆದರೆ ರಾಮರಾಯರೆ ಆ ಪದ್ಮಾಕರನ ಜವಾಬು ಅಂತೂ ಬಹಳ ಸರಲವಾಗಿತ್ತು. ಅವನಬಗ್ಗೆ ನಿಮಗೆ ಸಂದೇಹವೋ ಹೇಗೆ? ಇಂದು ಬೆಳಗ್ಗೆ ನಡೆದ ಖೂನಿಯ ಕಾಲಕ್ಕಂತೂ ಅವರು ಮನೆಯಲ್ಲೇ ಇದ್ದರು.'

'ಈ ಪ್ರಕರಣದಲ್ಲಿ ಈ ಪ್ಲ್ಯಾನ್ ಬಿಟ್ಟರೆ ಬೇರೆ ದಾರಿಯೆ ನನಗೆ ಕಾಣಿಸುವುದಿಲ್ಲ. ಇದನ್ನು ಸಿದ್ಧಗೊಳಿಸುವಲ್ಲಿ ನಾನು ತರ್ಕಶಾಸ್ತ್ರವನ್ನು ಹೇಗೆ ಉಪಯೋಗಿಸಿಕೊಂಡಿರುವೆನೆಂಬುದನ್ನು ನಿಮಗೆ ಬಿಡಿಸಿ ಹೇಳುವುದು ಕಷ್ಟ. ನಿಮ್ಮದೇನಾದರೂ ಬೇರೆ ಪ್ಲ್ಯಾನ್ ಇದ್ದರೆ ಬರಲಿ ಮುಂದೆ.'

'ನನ್ನದೇನೂ ಇಲ್ಲ. ಪುರಾವೆಯಾದರೂ ಬೇಕೋ ಬೇಡವೋ?'

'ಸರಿ ಹಾಗಾದರೆ, ನಿಮಗಂತೂ ಈಗ ಬೇರೆ ಕೆಲಸವೇನೂ ಇದ್ದಂತೆ ತೋರುವದಿಲ್ಲ. ಸಾಧ್ಯವಾದರೆ ನನ್ನೊಂದಿಗೆ ಎರಡು ಮೂರು ತಾಸು ಕಳೆದು ಬಿಡಿ.'

‘ ಒಪ್ಪಿಗೆ ರಾಯರೆ. ’

ಅಷ್ಟರಲ್ಲಿ ಪೋಲೀಸ್ ಸ್ಟೇಶನ್ ಬಂದಿತು. ಅಲ್ಲಿಂದ ಗುಪ್ತಪೋಲೀಸ ರಿಬ್ಬರನ್ನು ಹೀರಾಮಾಣೇಕ ಮ್ಯಾನ್ಶನ್ ಕಡೆಗೆ ಕಳುಹಿಸಿಕೊಟ್ಟ ತರುವಾಯ ಮೋಟಾರು ಟೇಲಿಗ್ರಾಫ್ ಆಫೀಸ್‌ಕಡೆ ಹೊರಳಿತು. ಅಲ್ಲಿ ಒಂದು ತಂತಿಯ ಫಾರ್ಮು ತೆಗೆದುಕೊಂಡು ರಾಮರಾಯರು ಅದರಮೇಲೆ ಈ ರೀತಿ ಬರೆದರು.

“ ರಜನೀಕಾಂತ ಗುಪ್ತ, ರತ್ನಪಡಿ ವ್ಯಾಪಾರಿ, ಕಲಕತ್ತಾ.

ಉತ್ತರಹಿಂದುಸ್ಥಾನದ ರಾಜಮನೆತನವೊಂದಕ್ಕೆಸಂಬಂಧಪಟ್ಟಮುತ್ತು ರತ್ನದೊಡವೆಗಳ ಖರೀದಿಗಾಗಿ ತಾವು ಸಂಘಟಿತ ಪ್ರಯತ್ನ ನಡಿಸುವುದಾಗಿ ವರದಿಯಿದೆ. ಅದು ನಿಜವಿದ್ದರೆ ತಾವು ಇಲ್ಲಿಗೆ ಕಳುಹಿಸಿರುವ ಪ್ರತಿನಿಧಿಗಳ ಹೆಸರು ವಿಳಾಸಗಳನ್ನು ತಿಳಿಸಿರಿ. ಸಹಿ—ರಾಮರಾವ್ ”

ಉತ್ತರಕ್ಕಾಗಿ ಹಣ ಕಟ್ಟಿದ ಅರ್ಜಂಟ್ ತಂತಿ ಬಿಡಲು ಛಾಲೀರಾಯರಿಗೆ ಹೇಳಿ ರಾಮರಾಯರು ಟೆಲಿಫೋನ್ ಎಕ್ಸ್‌ಚೇಂಜ್ ಕಡೆಗೆ ಹೊರಳಿದರು. ತಂತಿಗೆ ಉತ್ತರ ಬರುವ ತನಕ ಅವರು ಅಲ್ಲಿಯೆ ಕುಳಿತುಕೊಳ್ಳುವವರಿದ್ದರು. ರಾಮರಾಯರ ತಂತಿಯು ಗುಪ್ತ ವಿಳಾಸ ಆಫೀಸಿನಲ್ಲಿ ರಜಿಸ್ಟರಾಗಿದ್ದು ಅದು ರಜನೀಕಾಂತ ಗುಪ್ತರಿಗೆ ತಿಳಿದಿತ್ತು. ಆ ವಿಳಾಸಕ್ಕೆ ಬರುವ ತಂತೀ ಕಾಗದಗಳನ್ನು ಸ್ವತಃ ರಾಮರಾಯರಾಗಲಿ ಇಲ್ಲವೆ ಛಾಲೀರಾಯರಾಗಲಿ ಓದುತ್ತಿದ್ದರು. ಅವರನ್ನುಳಿದು ಬೇರಾರೂ ಅವುಗಳನ್ನು ಮುಟ್ಟುವಂತಿರಲಿಲ್ಲ.

ಟೆಲಿಫೋನ್ ಆಫೀಸಿನಲ್ಲಿ ರಾಮರಾಯರು ಹಿರಾಮಣೇಕ ಮ್ಯಾನ್ಷನ್ನಿನ ತಂತಿಗೆ ಸಂಬಂಧ ಜೋಡಿಸಿ ರಿಸೀವ್ಹರನ್ನು ಕಿವಿಯ ಮೇಲಿಟ್ಟುಕೊಂಡು ಸ್ವಸ್ಥವಾಗಿ ಕುಳಿತುಕೊಂಡರು. ಇನ್ಸಪೆಕ್ಟರ್ ಸಾಹೇಬರಿಗೂ ಅಂಥ ಮಹತ್ವದ ಕೆಲಸವೇನೂ ಇರಲಿಲ್ಲವಾದ್ದರಿಂದ ಅವರೂ ಅಲ್ಲಿಯೆ ಸಿಗರೇಟು ಸೇದುತ್ತ ಸ್ವಸ್ಥವಾಗಿ ಕುಳಿತುಕೊಂಡರು.

ಒಂದುಗಂಟೆಯಾಯಿತು. ಎರಡುಗಂಟೆ ಕಳೆಯಿತು. ಇನ್ಸಪೆಕ್ಟರ್ ಸಾಹೇಬರಿಗೆ ಬೇಸರಬಂದು ಹೋಗಿತ್ತು. ವಿಚಾರ ಮಾಡುವ ಚಟವಿಲ್ಲದ

ಮನುಷ್ಯನಿಗೆ ವೇಳೆಯನ್ನು ಹೇಗೆ ಕಳೆಯಬೇಕೆಂಬುದೊಂದು ಸಮಸ್ಯೆಯೇ ಆಗುತ್ತದೆ. ನಾಲ್ಕುಜನರನ್ನು ಸೇರಿಸುವುದು, ಚಹಾ ಕಾಫಿ ಹೊಡೆಯುವುದು ಬೀಡಿ ಸಿಗರೇಟು ಸೇದುವುದು, ಇಸ್ಪೀಟು ಆಡುವುದು, ಹರಟೆ ಹೊಡೆಯುವುದು ಇತ್ಯಾದಿ ಮಹತ್ವದ ಕಾರ್ಯಗಳಲ್ಲಿತೊಡಗುವವರಿಗೆ ವಿಚಾರಮಾಡಲು ಬಿಡುವೂ ಇರುವದಿಲ್ಲ, ಅಭ್ಯಾಸವೂ ಇರುವುದಿಲ್ಲ. ಮೋರೆಸಾಹೇಬರು ತುಂಬ ಬೇಸರಗೊಂಡರೆಂಬುದು ಗೊತ್ತಾದಾಗ ಇನ್ನೂ ಕೊಂಚ ಹೊತ್ತು ಕುಳಿತುಕೊಂಡಿರಬೇಕೆಂದು ರಾಮರಾಯರು ಹೇಳಿದರು. ಕೊನೆಯ ಸಿಗರೇಟನ್ನು ಹತ್ತಿಸಿ ಮೋರೆಯವರು ಅದು ಉರಿದು ಹೋದ ನಂತರ ಹೊರಡುವುದಾಗಿ ಹೇಳಿ ಕುಳಿತುಕೊಂಡರು

ಆದರೆ ಅವರ ಸಿಗರೇಟು ಮುಗಿಯುವುದರೊಳಗಾಗಿಯೆ ರಜನೀಕಾಂತರಿಂದ ಬಂದ ಉತ್ತರವನ್ನು ತೆಗೆದುಕೊಂಡು ಬಂದರು ಭಾಲೇರಾಯರು. "ಉತ್ತರ ಹಿಂದುಸ್ಥಾನದಲ್ಲಿನ ರತ್ನದೊಡವೆಗಳನ್ನು ಖರೀದಿ ಮಾಡಲು ನಮ್ಮ ಪರವಾಗಿ ಯಾರನ್ನೂ ಕಳುಹಿಸಿಲ್ಲ. ಅಲ್ಲದೆ ಇಲ್ಲಿಯ ದೊಡ್ಡ ದೊಡ್ಡ ರತ್ನಪಡಿ ವ್ಯಾಪಾರಿಗಳನ್ನು ವಿಚಾರಿಸಿದಾಗ ಅವರಾರೂ ಪ್ರತಿನಿಧಿಗಳನ್ನು ಕಳುಹಿಸಿಲ್ಲವೆಂದು ತಿಳಿಯಿತು" ಎಂಬ ಬಾಬೂಜಿಯ ತಂತಿಯನ್ನು ಓದಿ ರಾಮರಾಯರು ಅದನ್ನು ಮೋರೆಯವರಿಗೆ ಕೊಟ್ಟರು. ಅದನ್ನೋದಿದ ತರುವಾಯ ರಾಮರಾಯರ ಪ್ಲ್ಯಾನಿನಲ್ಲಿ ತಥ್ಯಾಂಶವಿರಬೇಕೆಂದು ಮೋರೆಯವರಿಗೆನ್ನಿಸತೊಡಗಿತು

ಅಷ್ಟರಲ್ಲಿ ಹೀರಾಮಾಣೀಕ ಮ್ಯಾನ್ಶನ್‌ದಲ್ಲಿನ ಟೆಲಿಫೋನಿನ ಗಂಟೆ ಬಾರಿಸತೊಡಗಿತು. ಒಡನೆಯೆ ಕೊಂಚಹೊತ್ತು ಸುಮ್ಮನಿರುವಂತೆ ರಾಮರಾಯರು ಇನ್ಸಪೆಕ್ಟರಿಗೆ ಸಂಜ್ಞೆ ಮಾಡಿದರು. ಟೆಲಿಫೋನ್ ಮೇಲಾದ ಸಂಭಾಷಣೆಯನ್ನು ಹಾಗೇ ಕೊಡಲಾಗಿದೆ.

'ಹಲೋ, ಯಾರವರು?'

'ನಾನು ಜಾಧವ. ನೀವಾರು?'

'ಸಂತಾಜಿ'

‘ ಸರಿ. ಏನು ಸಮಾಚಾರ ? ’

‘ ನಿಮ್ಮ ಸಮಾಚಾರ ತಿಳಿಯಲಿ ಮೊದಲು. ’

‘ ಆ ಬೇಟೆನಾಯಿ ರಾಮರಾವ್ ಬಂದಿದ್ದ. ನಮ್ಮ ಬಗ್ಗೆ ಅವನಿಗೆ ಪೂರಾ ಸಂಶಯು ಬಂದ ಹಾಗೆ ಕಾಣುತ್ತೆ. ನಮ್ಮ ಮೇಲೆ ಗುಪ್ತಪೋಲೀಸರ ಪಹರೆಯಿಡಲಾಗಿದೆಯೆಂದೂ ನನಗೆನ್ನಿಸುತ್ತೆ.’

‘ ಹೀಗೋ ? ಎಷ್ಟು ಜನಗನ್ನು ಇಟ್ಟಿದಾರೆ ? ’

‘ ಒಬ್ಬನನ್ನು ’

‘ ಹಾಗಾದರೆ ನೀವಿಬ್ಬರೂ ಇಂದು ಸಾಯುಂಕಾಲ ಹೊರಟುಬಿಡಿ. ಒಬ್ಬೊಬ್ಬರು ಒಂದೊಂದು ದಾರಿ ಹಿಡಿಯಿರಿ. ಅಂದರೆ ಒಬ್ಬರಾದರೂ ಮುಕ್ತರಾಗಬಹುದು.’

‘ ಆದರೆ ಹೋಗುವುದೆಲ್ಲಿಗೆ ? ’

‘ ರಾಮಪುರಕ್ಕೆ. ’

‘ ಸಂತಾಜಿ, ಅದು ಈಗಲೇ ಸಾಧ್ಯವಾಗಲಾರದೆಂದು ತೋರುತ್ತೆ.’

‘ ನಮ್ಮ ಮಾಲು ತಯಾರಾಗಿದೆ. ಪ್ಯಾಕಿಂಗ್ ಆಗಿ ಮುಗಿದಿದೆ ನಿಮ್ಮ ಮನುಷ್ಯನನ್ನು ಕಳುಹಿಸಿಕೊಡಿ.’

‘ ಆದರೆ ಈಗ ರಾಮಪುರಕ್ಕೆ ಹೊರಡುವುದು ನಮ್ಮಿಂದಂತೂ ಆಗದ ಮಾತು.’

‘ ಹಾಗಾದರೆ ರಾಮಪುರಕ್ಕೆ ಹೋಗುವ ಯಾವನಾದರೊಬ್ಬ ಸ್ನೇಹಿತನನ್ನು ನೋಡಿ. ಅವನ ಜೊತೆಗೆ ಲಗೇಜ್ ಮಾಡಿ ಕಳುಹಿಸಿ ಕೊಡುವ.’

‘ ಸರಿ ಸಾಯುಂಕಾಲ ನಾನು ಪ್ರಯತ್ನ ಮಾಡಿ ಯಾರನ್ನಾದರೂ ಹುಡುಕಿಕೊಂಡು ಅಲ್ಲಿಗೆ ಬರುವೆ. ಆತ ರಾತ್ರಿಯ ಪ್ಯಾಸೆಂಜರಿಗೆ ಹೊರಡಬಹುದು.’

'ಬ್ಯಾಂಕು ಇನ್ನೂ ಮುಚ್ಚಿಲ್ಲ ಮುಚ್ಚುವುದರೊಳಗಾಗಿ ಚೆಕ್ ಮುರಿಸಿ ಹಣ ತನ್ನಿ. ಹಣ ದೊರೆಯದ ವಿನಾ ಮಾಲು ದೊರೆಯಲಾರದು.'

'ಈಗ ಎಷ್ಟು ಹಣ ಬೇಕು?'

'ಐದು ಲಕ್ಷ ಕೊಡುವುದಾಗಿ ಶೇಟಜಿ ಒಪ್ಪಿಕೊಂಡಿದ್ದರು—ಸುಲಭವಾಗಿ ಕೆಲಸ ಮುಗಿದರೆ. ರಕ್ತ ಹರಿದು ಖೂನಿಯಾದರೆ ಇನ್ನೂ ಐದು ಲಕ್ಷ ಕೊಡುವುದಾಗಿ ಒಪ್ಪಿದ್ದರು.'

'ಸರಿ. ಅಷ್ಟು ಹಣ ನಮಗೆ ಕೂಡಲೆ ದೊರೆಯುವಂತೆ ಶೇಟಜಿ ವ್ಯವಸ್ಥೆ ಮಾಡಿದ್ದಾರೆ. ಹಣವನ್ನು ಎಲ್ಲಿಗೆ ತರಲಿ?'

'ಗಿರಗಾಂವ ನಿವಾಸದಿಂದ ನಾವು ನಮ್ಮ ಮುಕ್ಕಾಂ ಕಿತ್ತಿದ್ದೇವೆ. ಸದ್ಯ ನಳಬಜಾರದಲ್ಲಿ ಫೇಲಭಾಯಿಯ ಕಬ್ಬಿಣದ ವಖಾರಿನಲ್ಲಿದ್ದೇವೆ.'

'ಸರಿ. ಸಾಧ್ಯವಾದರೆ ಇಂದೇ ಬರ್ತೇನೆ. ಆಗದಿದ್ದರೆ ನಾಳೆ.'

'ಕಾಲ ತಳ್ಳುವುದರಿಂದ ಘಾತುಕವಾಗುವ ಸಂಭವವುಂಟು. ಈ ವಿಚಾರವನ್ನು ಬೇರಾರಿಗೂ ತಿಳಿಸಬೇಡಿ. ಆ ಪಾಟೀಲನಿಗೂ ತಿಳಿಸಬೇಡಿ. ಆತ ಮಹಾ ಅಂಜುಗುಳಿಯಾಗಿ ತೋರುತ್ತಾನೆ.'

'ಅವನಿಗೆ ಹೇಳಬೇಕಾದ ಅಗತ್ಯವೇನೂ ಇಲ್ಲ. ಈ ಹಣದ ಬಾಬ್ತು ಚೆಕ್ ಬೇರೆ ಇವೆ. ಅವು ನನ್ನ ವಶದಲ್ಲೇ ಇವೆ.'

ಗಂಟೆ ಬಾರಿಸಿ ಮಾತು ಮುಗಿಯುತ್ತಿದ್ದಾಗ ರಾಮರಾಯರು ಒಮ್ಮೆಲೆ ಎದ್ದರು. ಇನ್ಸಪೆಕ್ಟರ್ ಸಾಹೇಬರಿಗೆ ನಡೆದ ಮಾತುಕತೆಗಳನ್ನೆಲ್ಲ ತಿಳಿಸಿ ಸಾಯಂಕಾಲ ನಾಲ್ಕು ಗಂಟೆಯಿಂದ ರಾತ್ರಿ ಹನ್ನೊಂದು ಗಂಟೆಯ ವರೆಗೆ ಹತ್ತು ಜನ ಸಾದಾ ವೇಷದ ಪೋಲೀಸರೊಂದಿಗೆ ನಳಬಾಜಾರದಲ್ಲಿನ ಫೇಲಾಭಾಯಿಯ ಕಾರಖಾನೆಯ ಅಕ್ಕಪಕ್ಕದಲ್ಲಿರಲು ಸೂಚಿಸಿ ರಾಮರಾಯರು ಭಾಲೇರಾಯರೊಂದಿಗೆ ಮುಂದಿನ ಏರ್ಪಾಡಿಗಾಗಿ ತೆರಳಿದರು.

೬

## ಕಳ್ಳರು ಸಿಕ್ಕಿದರು!

ಅದೇ ದಿನ ಮಧ್ಯಾಹ್ನ ಸುಮಾರು ಮೂರು ಗಂಟೆಗೆ ಪದ್ಮಾಕರ ಮತ್ತು ಜಾಧವರು ಹಿರಾಮಣೇಕ ಮ್ಯಾನ್ಷನ್‌ದಿಂದ ಹೊರಬಿದ್ದರು. ಅವರ ಮೇಲೆ ಕಟ್ಟುನಿಟ್ಟಾದ ಪಹರೆಯನ್ನಿಡುವ ಅಗತ್ಯವೀಗ ಇರಲಿಲ್ಲವಾದ್ದರಿಂದ ರಾಮರಾಯರು ಅಲ್ಲಿ ಒಬ್ಬ ಗುಪ್ತ ಪೋಲೀಸನನ್ನು ಮಾತ್ರ ಇಟ್ಟಿದ್ದರು. ಇಬ್ಬರೂ ಹೊರಬಿದ್ದಾಗ ಗೊಂದಲದಲ್ಲಿ ಸಿಕ್ಕಿದವನ ಹಾಗೆ ಮುಖ ಮಾಡಿ ಪದ್ಮಾಕರನ ಹಿಂದಿನಿಂದ ಹೊರಡಬೇಕೆಂದೂ ಅವನಿಗೆ ಸೂಚನೆ ದೊರೆತಿದ್ದಿತಾದ್ದರಿಂದ ಜಾಧವನಿಗೆ ತನ್ನ ಆಟ ಸಫಲವಾಯಿತೆಂದು ಸಂತೋಷವಾಗದಿರಲಿಲ್ಲ

ಪೆಡರ್ ರೋಡಿನ ಮೇಲೆ ಶ್ರೀಮಂತರೇ ಹೆಚ್ಚಾಗಿ ವಾಸಿಸುವುದರಿಂದಲೂ, ಹತ್ತಿರ ಎಲ್ಲೂ ಟ್ರಾಮಿನ ರಸ್ತೆಯಿಲ್ಲವಾದುದರಿಂದಲೂ ಅಲ್ಲಿ ವಿಕ್ಟೋರಿಯಾ ಹಾಗೂ ಟ್ಯಾಕ್ಸಿಗಳು ಬಾಡಿಗೆಯ ಆಶೆಯಿಂದ ನಿಂತುಕೊಂಡಿರುತ್ತವೆ. ಹಿರಾಮಣೇಕ ಮ್ಯಾನ್ಷನ್ನಿನಿಂದ ಜಾಧವನು ಹೊರಬಂದಾಗ ಆತ ಚೆನ್ನಾಗಿ ಡ್ರೆಸ್ ಮಾಡಿಕೊಂಡಿದ್ದನಾದ್ದರಿಂದ ಟ್ಯಾಕ್ಸಿಯವನೊಬ್ಬ ಆಶೆಯಿಂದ ಅವನನ್ನೆ ನಿರೀಕ್ಷಿಸುತ್ತಿದ್ದ. ಜಾಧವನಿಗೆ ಬಹಳ ಕೆಲಸಗಳಿದ್ದುದರಿಂದ ಒಂದು ಟ್ಯಾಕ್ಸಿಯ ಅಗತ್ಯವಿತ್ತು. ಟ್ಯಾಕ್ಸಿಯವ ಕೈಮೇಲೆ ಮಾಡಿ 'ಬರಲೇನು?' ಎಂದು ಕೇಳುತ್ತಲೂ ಜಾಧವ ಅವನನ್ನು ಕರೆದು ಕೋಟೆಯಲ್ಲಿನ 'ತಿಬೇಟ್ ತಾರ್ತಾರ' ಬ್ಯಾಂಕಿನ ಕಡೆಗೆ ಬೇಗ ಗಾಡಿ ಹೊಡೆಯಲು ತಿಳಿಸಿದ

ಬ್ಯಾಂಕಿಗೆ ಹೋಗಿ ಚೆಕ್ ಕೊಟ್ಟು ನಗದು ಹಣ ತೆಗೆದುಕೊಳ್ಳಬೇಕಾದರೆ ಅರ್ಧ ಗಂಟೆ ಕಳೆದುಹೋಯಿತು ಹಣವನ್ನು ಎಣಿಸಿ ಇಡುವಂತೆ ಮೊದಲೇ ಸೂಚನೆ ದೊರೆತಿದ್ದಿತಾದುದರಿಂದ ನೋಟುಗಳ ಕಟ್ಟುಗಳನ್ನು ಒಂದು ಕಡೆ ಗುಂಪುಗೂಡಿಸಿ ಇಟ್ಟಿದ್ದರು. ಸಹಿ, ಎಣಿಕೆ ಇತ್ಯಾದಿ ವಿಧಿ ಮುಗಿಯುತ್ತಲೂ ಆತ ಅವುಗಳೊಂದಿಗೆ ಮರಳಿದ ರಾಮಪುರದ ಅನೇಕ

ಜನ ಹೊಟ್ಟೆ ಪಾಡಿಗಾಗಿ ಮುಂಬಯಿಗೆ ಬಂದು ಕೆಲವಾರು ಕಚೇರಿಗಳಲ್ಲಿ ಕೆಲಸ ಮಾಡುತ್ತಿದ್ದರು. ಇಂಥ ನಾಲ್ಕೈದು ಜನರ ಪರಿಚಯು ಜಾಧವನಿಗಿತ್ತು. ಒಂದು ಕಚೇರಿಗೆ ಹೋಗಿ ಅಂಥ ಪರಿಚಿತನೊಬ್ಬನನ್ನು ಕಂಡು ವಿಚಾರಿಸಿದಾಗ ಅಂದು ಅವರಲ್ಲೊಬ್ಬ ಕಾರಕೂನ ರಾಮಪುರಕ್ಕೆ ಹೋಗಲಿರುವನೆಂಬ ಸುದ್ದಿ ತಿಳಿಯಿತು. ರಾತ್ರಿ ಊರಿಗೆ ಹೋಗುವುದಕ್ಕಾಗಿ ಅವನಿಗೆ ರಜ ದೊರೆತಿದ್ದಿತಾದುದರಿಂದ ಸಾಯಂಕಾಲ ಬೇಗ ಮನೆಗೆ ಹೋಗಲು ಅಪ್ಪಣೆಯೂ ದೊರೆತಿದ್ದಿತು. ಕಚೇರಿಯಲ್ಲಿಯೆ ಆತನನ್ನು ಕಂಡು ಜಾಧವನು ತನ್ನದೊಂದು ಸಾಮಾನನ್ನು ಜೊತೆಗೆ ತೆಗೆದುಕೊಂಡು ಹೋಗಲು ಬಿನ್ನವಿಸಿಕೊಂಡ. ಮೋಟಾರಿನಲ್ಲೇ ಹೋಗುವುದಾದ್ದರಿಂದ ಬಹಳ ಹೊತ್ತು ಕಳೆಯಲಾರದೆಂದೂ ಸಾಮಾನನ್ನು ಬಾಬುರಾಯರಿಗೆ ಮುಟ್ಟಿಸಬೇಕಾಗಿದೆಯಾದ್ದರಿಂದ ಅವರು ಅದನ್ನು ನೋಡುತ್ತಲೂ ನಿನಗೆ ಬಹುಮಾನ ಕೊಟ್ಟು ಸಂತೋಷಪಡಿಸುವರೆಂದೂ ಜಾಧವ ಹೇಳಿದ. ಕೊನೆಗೆ ಆ ಕಾರಕೂನ ಒಪ್ಪಿಕೊಂಡ. ಅವನನ್ನು ಮೋಟಾರಿನಲ್ಲಿ ಕೂಡ್ರಿಸಿಕೊಂಡು ನಳಬಜಾರದ ಕಡೆಗೆ ಗಾಡಿ ಹೊಡೆಯುವಂತೆ ಶೋಫರನಿಗೆ ತಿಳಿಸಿದ

ನಳಬಾಜಾರದಲ್ಲಿ ಫೇಲಾಭಾಯಿಯ ಕಾರಖಾನೆಯೆದುರಿಗೆ ಮೋಟಾರು ನಿಲ್ಲುತ್ತಲೂ ಕಾರಕೂನನಿಗೆ ಅದರಲ್ಲೇ ಕೂಡಿರುವಂತೆ ಹೇಳಿ ಜಾಧವ ತಾನೊಬ್ಬನೇ ಒಳಸೇರಿದ. 'ತ್ರಿಮೂರ್ತಿ'ಗಳು ಅಲ್ಲಿದ್ದರು. ಹಣ ಎಣಿಸಿ ನೋಡುವುದರಲ್ಲಿ ಅಲ್ಲಿಯೂ ಬಹುಕಾಲ ಕಳೆಯಿತು. ಅನೇಕ ದಿನಗಳಿಂದ ಈ ಕಾರಖಾನೆ ಮುಚ್ಚಲ್ಪಟ್ಟಿತಾದ್ದರಿಂದ ಈ ಕಳ್ಳರು ಅಲ್ಲಿ ವಸತಿ ಹೂಡಿದ್ದರು ರತ್ನಗೋಲದ ಪೆಟ್ಟಿಗೆ ಬಹಳ ಭಾರವಾಗಿದ್ದಿತಾದುದರಿಂದ ಜಾಧವ, ಸಂತಾಜಿ, ಧನಾಜಿ ಈ ಮೂವರೂ ಕೂಡಿ ಅದನ್ನೆತ್ತಿ ಹೊರಗೆ ತಂದರು. ಪೆಟ್ಟಿಗೆಯನ್ನು ಮೋಟಾರಿನಲ್ಲಿಡಬೇಕಾಗಿದೆಯೆಂದು ಜಾಧವ ಹೇಳುತ್ತಲೂ ಡ್ರೈವರು ಹಿಂದಿನ ಭಾಗದ ಬಾಗಿಲು ತೆರೆದ. ಮೋಟರ್ ಡ್ರೈವರುಗಳು ಯಾವಾಗಲೂ ತಮ್ಮ ಜೊತೆಗೆ ಒಬ್ಬ ಮನುಷ್ಯನನ್ನಿಟ್ಟುಕೊಂಡಿರುತ್ತಾರೆ. ಹಾಗೆಯೆ ಈ ಮೋಟರಿನಲ್ಲೂ ಇನ್ನೊಬ್ಬ ವ್ಯಕ್ತಿಯಿದ್ದ. ಆತನೂ ಎದ್ದು ಪೆಟ್ಟಿಗೆಯನ್ನು ಒಳಗಿರಿಸಲು ನೆರವಾದ.

ಪೆಟ್ಟಿಗೆಯನ್ನು ಮೋಟಾರಿನಲ್ಲಿ ಸರಿಯಾಗಿ ಇಡುವುದಕ್ಕಾಗಿ ಜಾಧವ ಹಾಗೂ ಸಂತಾಜಿ ಒಳಸೇರಿದರು ಅಷ್ಟರಲ್ಲಿ ಮೋಟಾರ್ ಡ್ರೈವರು ಜೋರಾಗಿ ಸಿಳ್ಳು ಊದಿದ. ಅನಂತರ ಜೇಬಿನಿಂದ ಪಿಸ್ತೂಲು ತೆಗೆದು ಒಳಗಿದ್ದ ವ್ಯಕ್ತಿಗಳಿಗೆ ಅದನ್ನು ಗುರಿ ಹಿಡಿದ. ಈ ಕಡೆಗೆ ಅವನ ಜೊತೆಗಾರ ಹೊರಗಡೆ ನಿಂತಿದ್ದ ಧನಾಜಿಯ ಕೈಗೆ ಬೇಡಿ ತೊಡಿಸಿದ.

ಸಿಳ್ಳಿನ ಸದ್ದು ಕೇಳಿಸುತ್ತಲೂ ಎಂಟು ಹತ್ತು ಜನ ನಾಲ್ಕೂ ಕಡೆಯಿಂದ ಧಾವಿಸಿ ಬಂದು ಮೋಟಾರಿನಲ್ಲಿದ್ದವರನ್ನು ಬಂಧಿಸಿದರು.

ಜಾಧವನನ್ನು ಮೋಟಾರಿನಲ್ಲಿ ಕರೆದು ತಂದ ಡ್ರೈವರು ರಾಮರಾಯ ರೆಂಬುದೂ, ಅವನ ಜೊತೆಗಾರ ಭಾಲೇರಾಯರೆಂಬುದೂ ವಾಚಕರಿಗೆ ತಿಳಿದಿರ ಬೇಕು. ಅವರಿಬ್ಬರೂ ಅತ್ಯಂತ ಚಾಣಾಕ್ಷತನದಿಂದ ವೇಷ ಬದಲಾಯಿಸಿ ದ್ದರು. ಜಾಧವನಿಗೆ ಅವರ ಗುರುತು ತಿಳಿಯುವುದು ಹಾಗಿರಲಿ, ಅಪರಾಧಿ ಗಳನ್ನು ಹಿಡಿಯಲು ಅಲ್ಲಿಗೆ ಬಂದ ಇನ್ಸಪೆಕ್ಟರ್ ಮೋರೆ ಸಾಹೇಬರಿಗೂ ಅವರನ್ನು ಒಮ್ಮೆಲೆ ಗುರುತಿಸುವುದಾಗಲಿಲ್ಲ.

'ತ್ರಿಮೂರ್ತಿ'ಗಳ ಪೈಕಿ ಮೂರನೆಯವ ಇನ್ನೂ ಮುಕ್ತನಾಗಿಯೆ ಇದ್ದ. ಅವನನ್ನು ಬಂಧಿಸಲೆಂದು ರಾಮರಾಯರು ಇನ್ಸಪೆಕ್ಟರರ ಜೊತೆಗೆ ಕಾರಖಾನೆಯೊಳಕ್ಕೆ ನಡೆದರು. ಕಾರಖಾನೆಯ ಹಿಂದಿನ ಭಾಗ ಹಿಂದಿನ ರಸ್ತೆಯ ಹತ್ತಿರವೇ ಇದ್ದು ಬಾಗಿಲು ತೆರೆದಿದ್ದಿತು. ಆತ ಪಲಾಯನ ಹೇಳಿಸಿ ದ್ದುದು ಸ್ಪಷ್ಟವಾಗಿತ್ತು. ಅಂತೆಯೆ ಅವರು ಮರಳಿ ಬಂದು ಅಪರಾಧಿ ಗಳನ್ನೆಲ್ಲ ತೆಗೆದುಕೊಂಡು ಪೋಲೀಸು ಸ್ಟೇಶನ್ನಿಗೆ ಹೊರಟರು.

## ೧೦

## ರತ್ನಗೋಲದ ರಹಸ್ಯ

ಯಾವುದೊಂದು ಅಪಘಾತವಾಗದೆ ಇಷ್ಟೊಂದು ತ್ವರೆಯಿಂದ ರತ್ನ ಗೋಲವೂ ಸಿಕ್ಕಿತು. ಅದನ್ನು ಕದ್ದ ಕಳ್ಳರೂ ಸಿಕ್ಕಿದರು. ರಾಮರಾಯರಿಗೆ ತುಂಬ ಸಮಾಧಾನವಾಗಿದ್ದರೆ ಆಶ್ಚರ್ಯವಿಲ್ಲ. ಇಂದು ಮಧ್ಯಾಹ್ನ ಟೆಲಿಫೋ

ನಿನ ಮೇಲಾದ ಮಾತುಕತೆಗಳು ಕೇಳಲು ದೊರೆಯುದಿದ್ದರೆ ಜಾಧವ ರತ್ನ ಗೋಲವನ್ನು ರಾಮಪುರಕ್ಕೆ ಕಳುಹಿಸಿಬಿಡುತ್ತಿದ್ದ. ಒಮ್ಮೆ ಅದು ಬಾಬೂ ರಾಯರ ಕೈಗೆ ಮುಟ್ಟಿತೆಂದರೆ ಆಮೇಲೆ ಅದನ್ನು ಮರಳಿ ದೊರಕಿಸುವುದು ತುಂಬ ಕಷ್ಟದಕಾರ್ಯವೆಂಬುದು ರಾಮರಾಯರಿಗೆ ಗೊತ್ತಿದ್ದಿತು. ಜಾಧವನು ಅತ್ಯಂತ ಜಾಗರೂಕತೆಯಿಂದ ವರ್ತಿಸಿದ್ದನಾದ್ದರಿಂದ ಅವನ ಮಾಲೀಕನ ವಿರುದ್ಧವಾಗಿ ಪೋಲೀಸರಿಗೆ ಯಾವ ಸಾಕ್ಷಿಯೂ ದೊರೆಯಲು ಸಾಧ್ಯವಿರಲಿಲ್ಲ. ಜಾಧವನ ಹಾಗೂ ತ್ರಿಮೂರ್ತಿಗಳಲ್ಲಿಬ್ಬರ ಹೇಳಿಕೆಗಳಿಂದ ಬಾಬೂರಾಯರನ್ನು ಬಂಧಿಸುವುದು ಸಾಧ್ಯವಾದೀತೆಂದೂ ರಾಮರಾಯರಿಗೆನ್ನಿಸಲಿಲ್ಲ. ಕೇಸ್ ಪ್ರಾರಂಭವಾಯಿತು. ಅಪರಾಧಿಗಳು ಬಹಳ ಹುಷಾರಾಗಿ ಜವಾಬು ಕೊಟ್ಟ ರಾದ್ದರಿಂದ ಪ್ರತ್ಯಕ್ಷ ಪುರಾವೆಯು ವಿನಾ ಬೇರೆ ಏನನ್ನೂ ಅವರು ಹೊರಗೆಡವ ಲಿಲ್ಲ. ಆದರಿಂದಾಗಿ ಪದ್ಮಾಕರನೂ, ಬಾಬೂರಾಯರೂ ಕಾಯಿದೆಯ ಬಲೆ ಯಿಂದ ಪಾರಾಗಿ ಹೋದರು

+ + +

ರತ್ನಗೋಲದ ಬಗ್ಗೆ ಏನೋ ಗೊಂದಲ ನಡಿದಿದೆಯೆಂಬ ತಂತೀಸುದ್ದಿ ತಲ್ಪುತ್ತಲೂ ಸಂಸ್ಥಾನಿಕ ಮಹಾರಾಜರು ತಮ್ಮ ಪರಿವಾರದೊಂದಿಗೆ ಮುಂಬ ಯಿಗೆ ಬಂದು ಸೇರಿದರು. ರತ್ನಗೋಲವನ್ನು ವಶಕ್ಕೆ ತೆಗೆದುಕೊಂಡಬಳಿಕ ಅವರು ರಾಮರಾಯರನ್ನು ಮನಃಪೂರ್ವಕವಾಗಿ ಅಭಿನಂದಿಸಿ ಅವರಿಗೆ ಕೃತ ಜ್ಞತೆ ಅರ್ಪಿಸಿದರು

ಆದರೆ ರಾಮರಾಯರಿಗೆ ಮಾತ್ರ ಇನ್ನೂ ಸಮಾಧಾನವಾಗಿರಲಿಲ್ಲ. ರತ್ನ ಗೋಲದ ರಹಸ್ಯವನ್ನರಿಯಲು ಅವರ ಮನಸ್ಸು ಕಾತುರವಾಗಿತ್ತು. ಮಹಾ ರಾಜರ ದರಬಾರದ ಹಳೆಯ ಕಾಗದಪತ್ರಗಳನ್ನು ನೋಡುವ ಇಚ್ಛೆ ಅವರಿಗಿ ದ್ದಿತು. ಆ ಬಗ್ಗೆ ಸಮ್ಮತಿ ದೊರಕಿಸಿಕೊಂಡು ರಾಮರಾಯರು ಆ ಸಂಸ್ಥಾ ನಕ್ಕೆ ಹೋದರು. ಅಲ್ಲಿ ಹದಿನೈದುದಿನಗಳ ಕಾಲ ಇದ್ದು ಮುಂಬಯಿಗೆ ಮರಳಿ ಬಂದರು.

ಪ್ರತಿಯೊಂದು ಪದಾರ್ಥದ ಆಕಾರ ಹಾಗೂ ತೂಕ ನಿಶ್ಚಿತವಾದ ಪ್ರಮಾಣದಲ್ಲಿರುತ್ತದೆ. ರಾಮರಾಯರು ರತ್ನಗೋಲದ ತೂಕ ನೋಡಿದರು.

ಅದರ ಮೇಲಿನ ಮುತ್ತು, ರತ್ನ, ಮಾಣಿಕ್ಯಗಳ ತೂಕದ ಅಂದಾಜನ್ನು ಪ್ರಖ್ಯಾತ ರತ್ನಪಡಿ ವ್ಯಾಪಾರಿಗಳಿಂದ ತಿಳಿದುಕೊಂಡರು. ಆಮೇಲೆ ಲೆಕ್ಕ ಮಾಡಿ ನೋಡಿದರೆ ಚಿನ್ನದ ತೂಕಕ್ಕೂ ರತ್ನಗಳ ತೂಕಕ್ಕೂ ಸರಿಹೋಗಲಿಲ್ಲ.

ರತ್ನಗೋಲದ ಐತಿಹಾಸಿಕ ಮಹತ್ವ, ಹಾಗೂ ಆ ಲೋಕೋತ್ತರವಸ್ತುವನ್ನು ತಮ್ಮದನ್ನಾಗಿ ಮಾಡಿಕೊಳ್ಳುವ ತೀವ್ರಾಕಾಂಕ್ಷೆಗಳಿಂದಾಗಿ ಮಾತ್ರವೆ ಬಾಬೂರಾಯರು ಅದರ ಸಂಪಾದನೆಗಾಗಿ ಕಾತೊರೆದಿರಬಹುದೆಂದು ರಾಮರಾಯರಿಗೆನ್ನಿಸುತ್ತಿರಲಿಲ್ಲ. ಮಹಾರಾಜರ ದಪ್ತರಖಾನೆಯಲ್ಲಿದ್ದ ಗ್ರಂಥಗಳಿಂದ ಅವರಿಗೆ ಹೆಚ್ಚಿನ ಸಂಗತಿಯೇನೂ ತಿಳಿಯಲಿಲ್ಲ. ಆದರೆ 'ರತ್ನಗೋಲದ ರಹಸ್ಯವನ್ನು ಗುಪ್ತವಾಗಿರಿಸಬೇಕು' ಎಂಬ ಸೂಚನೆಯುನ್ನೊಳಗೊಂಡ ಹಳೆಯ ಕಾಗದಗಳೆರಡು ಮಾತ್ರ ಅವರಿಗೆ ಓದಲು ದೊರೆತಿದ್ದವು. ಮುಂಬಯಿಗೆ ಬಂದಂದಿನಿಂದ ರತ್ನಗೋಲದಮುಂದೆ ಕುಳಿತುಕೊಂಡು ಗಣಿತ ಮಾಡಿ ವಿಚಾರ ಮಾಡುವುದೇ ಅವರ ಕೆಲಸವಾಗಿಹೋಯಿತು.

ಒಂದುದಿನ ಸಾಯಂಕಾಲ ರಾಮರಾಯರು ಏನನ್ನಾದರೂ ಕಂಡುಹಿಡಿದರೇನೋ ಎಂದು ನೋಡಲು ಮಹಾರಾಜರು ಕೋಣೆಯೊಳಗಡೆ ಬಂದರು. ಹೀರಾಸಿಂಗರ ಆಫೀಸನಲ್ಲಿನ ತಿಜೋರಿಯು ಭದ್ರ ಕೋಣೆಯನ್ನೇ ರತ್ನಗೋಲಕ್ಕಾಗಿ ಕಾದಿರಿಸಲಾಗಿದ್ದಿತು. ಸುತ್ತುಮುತ್ತಲೂ ಕಾವಲು ಇರಿಸಿದ್ದುದರಿಂದ ಈಗ ಯಾವ ಭಯವೂ ಇರಲಿಲ್ಲ. ಮಹಾರಾಜರು ಬಂದಾಗ ರಾಮರಾಯರು ಯಾವುದೊ ವಿಚಾರದಲ್ಲಿ ತಲ್ಲೀನರಾಗಿದ್ದುದರಿಂದ ಮೈಮರೆತು ಹೋಗಿದ್ದರು. ಯಾವುದರ ಅರಿವೂ ಅವರಿಗಿರಲಿಲ್ಲ. ತುಂಬ ಕೌತುಕದಿಂದ ಅವರನ್ನು ನಿಟ್ಟಿಸುತ್ತ ಮಹಾರಾಜರು ಬಾಗಿಲಲ್ಲಿಯೆ ನಿಂತುಕೊಂಡರು. ಇತ್ತ ರಾಮರಾಯರು ಮಂತ್ರ ಮುಗ್ಧ ಮನುಷ್ಯನಹಾಗೆ ನಿಧಾನವಾಗಿ ಎದ್ದುನಿಂತು ರತ್ನಗೋಲವನ್ನು ಕೆಳಗೆ ತೆಗೆದುಕೊಂಡರು. ಲಂಕಾತೀರದ ಹತ್ತಿರವಿದ್ದ ಚಿಹ್ನವನ್ನು ಬಲವಾಗಿ ಒತ್ತಿ ಎಡಕ್ಕೆ ಬಲಕ್ಕೆ ತಿರುಗಿಸಿದರು. ಅನಂತರ ಉತ್ತರ ಹಾಗೂ ದಕ್ಷಿಣ ಧ್ರುವಗಳಮೇಲೆ ಕೂಡ್ರಿಸಿದ ರತ್ನಗಳನ್ನೂ ಹಾಗೇ ಒತ್ತಿದರು. ಒಡನೆಯೆ ರತ್ನಗೋಲ ತನ್ನಷ್ಟಕ್ಕೆ ತಾನೆ ಇಬ್ಭಾಗವಾಯಿತು. ಮಧ್ಯಭಾಗದಲ್ಲಿದ್ದ ಜಾಗದಲ್ಲಿಂದ ಕೋಳಿಯ ತತ್ತಿಗಿಂತ ದೊಡ್ಡದಾಗಿ ಅತ್ಯಂತ ತೇಜಸ್ವಿಯಾಗಿದ್ದ ರತ್ನವೊಂದು ಹೊರಬಿತ್ತು!

ಕೋಹಿನೂರ, ಕುಲಿನನ್, ಹೋಪ್ ಇತ್ಯಾದಿ ಜಗತ್ಪ್ರಸಿದ್ಧ ರತ್ನಗಳನ್ನೂ ಸೂಚಿಸುವಂಥ ಈ ರತ್ನ ದೃಷ್ಟಿಗೆ ಬೀಳುತ್ತಲೂ ರಾಜೇಸಾಹೇಬರ ಮುಖದಿಂದ ಆಶ್ಚರ್ಯೋದ್ಗಾರವೊಂದು ಹೊರಬಿತ್ತು. ಆ ಸ್ವರ ಕೇಳಿಸಿದಾಗ ರಾಜಗಮನದ ಸುಳಿವು ರಾಮರಾಯರಿಗೂ ಆಯಿತು. ಇಬ್ಬರೂ ಕೂಡಿ ಆ ರತ್ನದ ತೂಕ, ಮೌಲ್ಯ ಇತ್ಯಾದಿಗಳನ್ನು ಪರೀಕ್ಷಿಸಿ ನೋಡಿದಬಳಿಕ ರಾಮರಾಯರು ಮನೆಗೆ ಹೋಗತೊಡಗಿದರು. ಆಗ ರಾಜೇಸಾಹೇಬರ ಕಣ್ಣುಗಳಲ್ಲಿ ಹನಿ ಕಾಣಿಸಿಕೊಂಡವು ಯಾವ ಸ್ವಾರ್ಥದ ವಿಚಾರವನ್ನೂ ಇಟ್ಟುಕೊಳ್ಳದೆ ಕೇವಲ ಸಮಾಜಕಂಟಕರನ್ನು ಹಿಡಿದು ಜನತೆಗೆ ಸುಖವನ್ನೊದಗಿಸಿಕೊಡುವ ನಿಮಿತ್ತದಿಂದ ಗುಪ್ತಪೋಲೀಸು ಕೆಲಸದಂಥ ಸಂಕಟಮಯ ವ್ಯವಸಾಯದಲ್ಲಿ ತೊಡಗಿದ್ದ ರಾಮರಾಯರ ಬಗ್ಗೆ ರಾಜರ ಮನಸಿನಲ್ಲಿ ಆದರ ಹೆಚ್ಚಿಕೊಂಡಿದ್ದಿತು. ಇಂಥ ಮನುಷ್ಯನು ತಮ್ಮ ರಾಜ್ಯದಲ್ಲಿಯಾವುದಾದರೊಂದು ಹೊಣೆಗಾರ ಸ್ಥಾನದಲ್ಲಿದ್ದರೆ ಪ್ರಜೆಗಳ ಕಲ್ಯಾಣವಾಗದಿರದೆಂದು ಭಾವಿಸಿ ಅವರು ರಾಮರಾಯರಿಗೆ ಆ ಬಗ್ಗೆ ವಿನಂತಿಮಾಡಿಕೊಂಡರು ಆದರೆ ದೊಡ್ಡ ನಗರಗಳಲ್ಲಿ ಭಯಂಕರ ಅಪರಾಧಿಗಳಿಂದ ಜನತೆಗಾಗುವ ತೊಂದರೆಗಳನ್ನು ತಪ್ಪಿಸುವುದು ಹೆಚ್ಚು ಮಹತ್ವದ ಕೆಲಸವಾಗಿರುವುದರಿಂದಲೂ, ಆ ಕಾರ್ಯಕ್ಷೇತ್ರ ವಿಶಾಲವಾದುದರಿಂದಲೂ ಅದನ್ನು ಬಿಟ್ಟು ತಾವು ಹೊರಟುಬಿಟ್ಟರೆ ಜನಕ್ಕೆಅನನುಕೂಲವಾದೀತೆಂದು ರಾಮರಾಯರು ಮಹಾರಾಜರಿಗೆ ಹೇಳಿದರು

ರತ್ನಗೋಲದ ಮೇಲೆ ಕೂಡ್ರಿಸಿದ ಮುತ್ತು ರತ್ನ ಮಾಣಿಕ್ಯಗಳನ್ನು ಬಿಡಿಸಿ ಒಂದೊಂದನ್ನಾಗಿ ಮಾರಿದುದರಿಂದ ಅಪಾರ ಬೆಲೆ ಬಂದಿತು. ಸ್ವತಃ ತಾವೇ ನಿಂತುಕೊಂಡು ಎಲ್ಲವನ್ನೂ ಮಾರಾಟ ಮಾಡಿಸಿ ರಾಜರು ತಮ್ಮ ಸಂಸ್ಥಾನಕ್ಕೆ ಮರಳಿಹೋದರು. ಅವರ ಆಮಂತ್ರಣದ ಮೇರೆಗೆ ರಾಮರಾಯರೂ ಕೆಲ ದಿನಗಳ ಮಟ್ಟಿಗೆ ಸಂಸ್ಥಾನಕ್ಕೆ ಹೋಗಿ ರಾಜರ ಅತಿಥಿಯಾಗಿದ್ದು ಪ್ರಜಾಹಿತಕ್ಕಾಗಿ ಕೆಲವು ಸೂಚನೆಕೊಟ್ಟು ಬಂದರು.

